ರಾಮಕೃಷ್ಣ ಮಹಾಸಂಘದ ಕನ್ನಡ ಮಾಸಪತ್ರಿಕೆ




# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ

₹ 14

ಅಕ್ಟೋಬರ್ -2016

# PACKAGE TOURS

Hotel Room Accom. &
South Indian Veg. Food

## MINI ANDHRA : 05 Days

**OCT 22**



Mantralaya, Srishaila, Mahanandi,
Ahobilam (Nava Narasimha)

## SOUTH INDIA : 10 Days

**NOV 24**



Guruvayur, Kaladi, Alleppey, Trivandram, Suchindram, Kovalam Beach, Kanyakumari, Rameshwaram, Madurai, Trichy, Srirangam, Tanjore, Kumbakonam, Chidambaram, Thiruvannamalai, Navagraha Temples

## KOLKATA – DARJEELING SPECIAL : 16 Days

**NOV 19**



Darjeeling, Gangtok, Siliguri, Kolkata,
Puri, Konark, Chilka Lake, Bhuvaneshwar

## KASHI – GAYA – CHITRAKOOTA : 14 Days

Allahabad, Gaya, Bodhgaya, Kashi, Saranath, Ayodhya, Naimisharanya, Chitrakoot

## CHARODHAM : 19 Days



Haridwar, Yamunotri, Gangotri, Uttarkashi, Kedarnath, Triyugi (Optional), Mana, Vyasa Guha, Ganesh Guha, Keshava Prayag, Badrinath, Rishikesh, New Delhi

Also Contact for

**HOLY KAILASH & MANASA SAROVAR YATRA** MAY/ JUNE/JULY

**HOLY AMARNATH & VAISHNAVI DEVI** JUNE / JULY

# Shri Hansaa Travels



**Recognised by Department of Tourism, Govt. of Karnataka**

: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

080-26643276 / 26543891 / 9341215612 / 9341415612

ವ್ಯವಸ್ಥಾಪಕ ಸಂಪಾದಕರು
ಸ್ವಾಮಿ ಮುಕ್ತಿದಾನಂದ
ಸಂಪಾದಕರು
ಸ್ವಾಮಿ ಜ್ಞಾನಯೋಗಾನಂದ
ನೆರವು:
ಆರ್. ಎಸ್. ಪೂರ್ಣಾನಂದ
ಡಾ. ಕೆ. ಎಲ್. ಪ್ರಸನ್ನಾಕ್ಷೀ
ಡಾ. ಎಚ್. ಪಾಂಡುರಂಗ ವಿಠಲ

ಅಕ್ಷರ ಜೋಡಣೆ
ಶ್ರೀರಾಮಕೃಷ್ಣ ಆಶ್ರಮ, ಮೈಸೂರು
ಮುದ್ರಣ
ಮಯೂರ್ ಗ್ರಾಫಿಕ್ಸ್, ಬೆಂಗಳೂರು

E-mail:
mysuru.vivekaprabha@rkmm.org
Website: www.vivekaprabha.net
ಫೋನ್ : 9481533505

ಮುಖಪುಟ:
ರಾಮನಾಥಪುರಂ ಆಶ್ರಮ

**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

**ಚಂದಾ ವಿವರ**

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಅಕ್ಟೋಬರ್-2016 ಸಂಪುಟ 17 ಸಂಚಿಕೆ 10



# ವಿವೇಕ ಪ್ರಭ

 ಪರಿವಿಡಿ 





 

ವಿಶೇಷ ಲೇಖನಗಳು



















## ಪ್ರಾರ್ಥನೆ

# ಶ್ರೀ ಗೋವಿಂದಾಷ್ಟಕಮ್ - ೩



**ಕಾಂತಂ ಕಾರಣಕಾರಣಮಾದಿಮನಾದಿಂ ಕಾಲಘನಾಭಾಸಂ**
**ಕಾಲಿಂದೀಗತಕಾಲಿಯಶಿರಸಿ ಸುನೃತ್ಯಂತಂ ಮುಹುರತ್ಯಂತಮ್ ।**
**ಕಾಲಂ ಕಾಲಕಲಾತೀತಂ ಕಲಿತಾಶೇಷಂ ಕಲಿದೋಷಘ್ನಂ**
**ಕಾಲತ್ರಯಗತಿಹೇತುಂ ಪ್ರಣಮತ ಗೋವಿಂದಂ ಪರಮಾನಂದಮ್ ॥೭॥**

ಸುಂದರನೂ, ಕಾರಣಗಳಿಗೆ ಆದಿಕಾರಣನೂ, ಅನಾದಿಯೂ, ಆಭಾಸ ರಹಿತ ಕಾಲಸ್ವರೂಪನೂ, ಕಾಳಿಂಗಸರ್ಪದ ತಲೆಯ ಮೇಲೆ ಸುಂದರ ವಾಗಿ ನೃತ್ಯ ಮಾಡುತ್ತಿರುವವನೂ, ಕಾಲರೂಪನಾಗಿದ್ದರೂ ಕಾಲದ ಅಂಶಗಳಿಂದ ದೂರವಿರುವವನೂ, ಎಲ್ಲವನ್ನೂ ತಿಳಿದಿರುವವನೂ, ಸರ್ವಜ್ಞನೂ, ಕಲಿದೋಷಗಳನ್ನು ನಾಶಗೊಳಿಸುವವನೂ, ತ್ರಿಕಾಲಗಳ ಗತಿಗೆ ಕಾರಣನೂ ಆದ, ಅತ್ಯಂತ ಶ್ರೇಷ್ಠನಾದ ಆನಂದರೂಪೀ ಗೋವಿಂದನನ್ನು ನಮಸ್ಕರಿಸಿ.

**ವೃಂದಾವನಭುವಿ ವೃಂದಾರಕಗಣವೃಂದಾರಾಧ್ಯಂ ವಂದೇಽಹಂ**
**ಕುಂದಾಭಾಮಲಮಂದಸ್ಮೇರಸುಧಾನಂದಂ ಸುಹೃದಾನಂದಮ್ ।**
**ವಂದ್ಯಾಶೇಷಮಹಾಮುನಿಮಾನಸವಂದ್ಯಾನಂದಪದದ್ವಂದ್ವಂ**
**ವಂದ್ಯಾಶೇಷಗುಣಾಬ್ಧಿಂ ಪ್ರಣಮತ ಗೋವಿಂದಂ ಪರಮಾನಂದಮ್ ॥೮॥**

ವೃಂದಾವನದ ಭೂಮಿಯಲ್ಲಿ ಮುನಿಸಮೂಹಕ್ಕೆ ಆರಾಧ್ಯದೇವ ನಾಗಿರುವವನೂ, ಕುಂದಪುಷ್ಪಕ್ಕೆ ಸಮನಾದ ನಿರ್ಮಲ ಮುಗುಳು ನಗೆಯಲ್ಲಿ ಅಮೃತದ ಆನಂದವು ತುಂಬಿರುವವನೂ, ಗೆಳೆಯರಿಗೆ ಆನಂದವನ್ನುಂಟುಮಾಡುವವನೂ, ಮಹಾಮುನಿಗಳ ಹೃದಯದಲ್ಲಿ ವಂದನೀಯನೂ, ಆನಂದಮಯ ಪಾದಗಳುಳ್ಳವನೂ, ವಂದನೀಯ ಗುಣಸಾಗರನೂ ಆದ, ಅತ್ಯಂತ ಶ್ರೇಷ್ಠನಾದ ಆನಂದರೂಪವುಳ್ಳ ಗೋವಿಂದನನ್ನು ನಮಸ್ಕರಿಸಿ.

**ಗೋವಿಂದಾಷ್ಟಕಮೇತದಧೀತೇ ಗೋವಿಂದಾರ್ಪಿತಚೇತಾ ಯೋ**
**ಗೋವಿಂದಾಚ್ಯುತ ಮಾಧವ ವಿಷ್ಣೋ ಗೋಕುಲನಾಯಕ ಕೃಷ್ಣೇತಿ ।**
**ಗೋವಿಂದಾಂಘ್ರಿಸರೋಜಧ್ಯಾನಸುಧಾಜಲಧೌತಸಮಸ್ತಾಘೋ**
**ಗೋವಿಂದಂ ಪರಮಾನಂದಾಮೃತಮಂತಃಸ್ಥಂ ಸ ಸಮಭ್ಯೇತಿ ॥೯॥**

'ಅಚ್ಯುತ, ಮಾಧವ, ವಿಷ್ಣು , ಗೋಕುಲನಾಯಕ, ಕೃಷ್ಣ' ಎಂದು ಮೊದಲಾಗಿ ಉಚ್ಚರಿಸುತ್ತಾ ಯಾರು ಆ ಗೋವಿಂದನಲ್ಲೇ ತನ್ನ ಭಕ್ತಿ ಯನ್ನು ಅರ್ಪಿಸಿದ ಮನಸುಳ್ಳವನಾಗಿ, ಈ ಗೋವಿಂದಾಷ್ಟಕವನ್ನು ಅಭ್ಯಸಿಸುವನೋ, ಅವನು ವಿಷ್ಣುವಿನ ಚರಣಕಮಲಗಳ ಅಮೃತಜಲ ದಿಂದ ತನ್ನೆಲ್ಲಾ ಪಾಪಗಳನ್ನು ತೊಳೆದುಕೊಂಡು, ತನ್ನಲ್ಲಿರುವ ಪರಮಾನಂದರೂಪಿ ಗೋವಿಂದನನ್ನು ಸೇರುವನು.

**- ಶ್ರೀ ಶಂಕರಾಚಾರ್ಯ**

## ಸೂಕ್ತಿಪ್ರಭ

ಶಬ್ದವೆಂಬೆನೆ, ಶ್ರೋತ್ರದೆಂಜಲು.
ಸ್ಪರ್ಶವೆಂಬೆನೆ, ತ್ವಕ್ಕಿನೆಂಜಲು.
ರೂಪೆಂಬೆನೆ, ನೇತ್ರದೆಂಜಲು.
ರುಚಿಯೆಂಬೆನೆ, ಜಿಹ್ವೆಯಿಂಜಲು.
ಪರಿಮಳವೆಂಬೆನೆ, ಘ್ರಾಣದೆಂಜಲು.
ನಾನೆಂಬೆನೆ, ಅರಿವಿನೆಂಜಲು.
ಎಂಜಲೆಂಬ ಭಿನ್ನವಳಿದ ಬೆಳಗಿನೊಳಗಣ ಬೆಳಗು
ಗುಹೇಶ್ವರ ಲಿಂಗವು.

*-ಅಲ್ಲಮ ಪ್ರಭು*

ಜೀವನ ಒಂದೋ ಮಹಾಸಾಹಸ; ಇಲ್ಲವಾದರೆ ಅದು ಏನೂ ಅಲ್ಲ. *-ಹೆಲೆನ್ ಕೆಲರ್*

ಏನನ್ನು ಮಾಡಲೇಬೇಕೋ ಅದನ್ನು ಮಾಡಿಬಿಡು. ಅದು ಸಂತಸದಾಯಕವಾಗಿ ಇರಬೇಕಾಗಿಲ್ಲ ; ಆದರೆ ಅದರಲ್ಲಿ ಶ್ರೇಷ್ಠತೆ ಯಿರುವುದು. *-ಜಾರ್ಜ್ ಬರ್ನಾರ್ಡ್ ಷಾ*

ಜೀವನದಲ್ಲಿ ಹೆದರಬೇಕಾದದ್ದೇನೂ ಇಲ್ಲ ; ಅದನ್ನು ಅರಿತು ಕೊಳ್ಳಬೇಕು ಅಷ್ಟೆ. ಈಗ ಇನ್ನಷ್ಟನ್ನು ಅರಿತುಕೊಳ್ಳೋಣ, ಅದರಿಂದ ನಮ್ಮ ಭಯವೆಲ್ಲ ಕಡಿಮೆಯಾಗುವುದು.

*-ಮೇರಿ ಕ್ಯೂರಿ*

ರಾಮಕೃಷ್ಣ ಮಠ
ಮಂಗಳಾದೇವಿ, ಮಂಗಳೂರು
0824-2414412, 9449288200
mangaloremath@gmail.com



# ಭಾವಸಂಗಮ

## ಭಕ್ತ ಸಮಾಗಮ

4, 5, 6 ನವೆಂಬರ್ 2016

ಕಡಲ ಕಿನಾರೆ ಮಂಗಳೂರಿಗೆ ಹೃತ್ಪೂರ್ವಕ ಸ್ವಾಗತ

**ಬನ್ನಿರಿ! ಆಲಿಸಿ, ಆನಂದಿಸಿ.**



### ದಿವ್ಯತ್ರಯರ ಧಾರೆ

ರಾಮಕೃಷ್ಣ ಸಂಘ: ಬೆಳೆದು ಬಂದ ಬಗೆ
ರಾಮಕೃಷ್ಣ ಸಂಘದ ಧ್ಯೇಯೋದ್ದೇಶಗಳು ಮತ್ತು ವೈಶಿಷ್ಟ್ಯ
'ಶ್ರೀರಾಮಕೃಷ್ಣ ಲೀಲಾಪ್ರಸಂಗ' –
ಯುಗಾವತಾರನ ಜೀವನದರ್ಶನ
'ಶ್ರೀರಾಮಕೃಷ್ಣ ವಚನವೇದ': ಉಪದೇಶಕಥನದ ಅನನ್ಯತೆ
ಇಂದಿಗೆ ಬೇಕಾದ ಶ್ರೀರಾಮಕೃಷ್ಣ
ಶ್ರೀಮಾತೆಯ ಜೀವನಕಥನ : ಸರಳತೆಯಲ್ಲಿ ಭವ್ಯತೆ
ಶ್ರೀಮಾತೆಯ ಸಂದೇಶ: ಅನುದಿನದ ಅಧ್ಯಾತ್ಮ
ಆಧುನಿಕ ಮಹಿಳೆಗೆ ಶ್ರೀಮಾತೆಯವರ ಪ್ರಸ್ತುತತೆ
ಸ್ವಾಮಿ ವಿವೇಕಾನಂದರ ಜೀವನ: ಸಾಧನೆ–ಸಿದ್ಧಿಗಳ ಸ್ವರೂಪ
ಸ್ವಾಮಿ ವಿವೇಕಾನಂದರು ನಿರೂಪಿಸಿದಂತೆ ಯೋಗಮಾರ್ಗಗಳ ವಿನ್ಯಾಸ
ಸಮಕಾಲೀನ ಜಗತ್ತಿಗೆ ಸ್ವಾಮಿ ವಿವೇಕಾನಂದರ ಬೆಳಕು

### ಅಧ್ಯಾತ್ಮಧಾರೆ

ಅಧ್ಯಾತ್ಮ ಮತ್ತು ತ್ಯಾಗಜೀವನ
ಅಧ್ಯಾತ್ಮ ಮತ್ತು ಕುಟುಂಬ ಜೀವನ
ಅಧ್ಯಾತ್ಮ ಮತ್ತು ಸಮಾಜ ಜೀವನ
ಜಪ
ಧ್ಯಾನ
ಸ್ವಾಧ್ಯಾಯ
ಸಾಹಿತ್ಯ ಮತ್ತು ಅಧ್ಯಾತ್ಮ
ಶಿಕ್ಷಣ ಮತ್ತು ಅಧ್ಯಾತ್ಮ
ಕ್ರೀಡೆ ಮತ್ತು ಅಧ್ಯಾತ್ಮ

### ಶಾಸ್ತ್ರ–ಕಾವ್ಯಧಾರೆ

ವೇದವಾಙ್ಮಯ: ಒಂದು ಅವಲೋಕನ
ಉಪನಿಷತ್ತುಗಳ ತಾತ್ವಿಕತೆ
ಭಗವದ್ಗೀತೆಯ ಸಂದೇಶ
ರಾಮಾಯಣದ ಲೋಕದರ್ಶನ
ಮಹಾಭಾರತ ಮತ್ತು ಜೀವನಮೌಲ್ಯಗಳು
ಭಾಗವತದರ್ಶನ

ಭಾವಸಂಗಮ – ಮೂರು ದಿನಗಳ ಕಾಲ ನಡೆಯಲಿರುವ ವಿಶೇಷ ಭಕ್ತ ಸಮಾಗಮ. ಪ್ರಧಾನವಾಗಿ ಒಂಬತ್ತು ಗೋಷ್ಠಿಗಳ ಮೂರು ಧಾರೆಗಳಲ್ಲಿ ಈ ಸಮ್ಮೇಳನವನ್ನು ಕಲ್ಪಿಸಿದೆ – ದಿವ್ಯತ್ರಯರ ಧಾರೆ, ಅಧ್ಯಾತ್ಮ ಧಾರೆ, ಶಾಸ್ತ್ರ–ಕಾವ್ಯ ಧಾರೆ.

ದಿವ್ಯತ್ರಯರ ಜೀವನ–ಸಂದೇಶ, ಸಮಕಾಲೀನ ಬದುಕಿಗೆ ಅವುಗಳ ಅನ್ವಯ ಇವನ್ನು 'ದಿವ್ಯತ್ರಯರ ಧಾರೆ' ಒಳಗೊಳ್ಳುತ್ತದೆ. ಅಧ್ಯಾತ್ಮದ ಸ್ವರೂಪ, ಬದುಕಿನ ಸಂದರ್ಭದಲ್ಲಿ ಅದರ ಅನುಷ್ಠಾನ, ಸಾಧನೆಯ ಮುಖಗಳು, ಬದುಕಿನ ವಿವಿಧ ಕ್ಷೇತ್ರಗಳೊಂದಿಗೆ ಅಧ್ಯಾತ್ಮವು ಹೊಂದಿರುವ ಸಂಬಂಧ ಇವನ್ನು 'ಅಧ್ಯಾತ್ಮ ಧಾರೆ'ಯ ಗೋಷ್ಠಿಗಳು ಚರ್ಚಿಸುತ್ತವೆ. ವೇದ, ಉಪನಿಷತ್ತುಗಳು, ಭಗವದ್ಗೀತೆ, ರಾಮಾಯಣ, ಮಹಾಭಾರತ, ಭಾಗವತ ಇವುಗಳ ತಾತ್ವಿಕತೆ ಹಾಗೂ ಅನ್ವಯಗಳ ಹಲವು ನೆಲೆಗಳ ಚಿಂತನೆ 'ಶಾಸ್ತ್ರ–ಕಾವ್ಯಧಾರೆ'ಯ ಗೋಷ್ಠಿಗಳಲ್ಲಿರುತ್ತವೆ. ವಿಶೇಷವಾಗಿ ರಾಮಕೃಷ್ಣ ಪರಂಪರೆ ಹಾಗೂ ಸಾಧಾರಣ ನೆಲೆಯಲ್ಲಿ ಭಾರತೀಯ ತತ್ತ್ವ–ಅಧ್ಯಾತ್ಮಗಳ ಪರಂಪರೆಗಳನ್ನು ಈ ಸಮ್ಮೇಳನ ಅನಾವರಣಗೊಳಿಸಲಿದೆ. ಇದರೊಂದಿಗೆ ಪ್ರಶ್ನೋತ್ತರ, ಭಜನೆ, ನಿರ್ದೇಶಿತ ಧ್ಯಾನ, ಸಾಂಸ್ಕೃತಿಕ ಕಾರ್ಯಕ್ರಮಗಳು ಈ ಸಮ್ಮೇಳನದ ಭಾಗವಾಗಿರುತ್ತವೆ. ಇಂತಹ ಅಪೂರ್ವ ಭಕ್ತಸಮಾಗಮದಲ್ಲಿ ಭಾಗವಹಿಸುವ, ಕಾರ್ಯಕ್ರಮಗಳನ್ನು ಆನಂದಿಸಿ ಆಸ್ವಾದಿಸುವ ಸದವಕಾಶ ನಿಮ್ಮದಾಗಲಿ.

**ನೀವು ಬನ್ನಿ , ನಿಮ್ಮ ಮಿತ್ರರನ್ನೂ ಕರೆತನ್ನಿ.**

**ಪ್ರವೇಶ ಶುಲ್ಕ**
ವಸತಿ ಸಹಿತ – ರೂ. 500/-
ವಸತಿ ರಹಿತ – ರೂ. 300/-

**ಸಂಪರ್ಕಿಸಿ**
9449288200

ಸಂಪಾದಕೀಯ

# ಎರಡು ಜಾಗತಿಕ ಚಲನೆಗಳು

ಇಂದು ಪ್ರಪಂಚದಲ್ಲಿ ಪ್ರತಿದಿನ ನಡೆಯುತ್ತಿರುವ ಆಗುಹೋಗುಗಳನ್ನು ಗಮನಿಸಿದಾಗ ಒಂದು ವಿಷಯ ಸ್ಪಷ್ಟವಾಗುತ್ತದೆ: ಜಗತ್ತಿನ ಎಲ್ಲ ಗೊಂದಲಗಳ ನಡುವೆ, ಅದೆಲ್ಲೋ ಶಾಂತಿಯ, ಸಮಾಧಾನದ, ನೆಮ್ಮದಿಯ ಕರೆ ಕೇಳಿಸುತ್ತದೆ. ಕೊಲೆ, ಸುಲಿಗೆ, ರಕ್ತಪಾತ, ಅಂತಃಕಲಹ, ಅನಾಚಾರಗಳ ನಡುವೆ, ಕ್ಷಿತಿಜದಾಚೆಯೆಲ್ಲೋ ನವಜೀವನದ, ಹೊಸಹುಟ್ಟಿನ ಮುಂಬೆಳಗು ಮೂಡಿಬರುವಂತಿದೆ. ಪ್ರಪಂಚ ನಾಶದ, ಮಹಾಯುದ್ಧದ ಹಾಗೂ ಭಯೋತ್ಪಾದಕರ ಮಾರಕ ಕೃತ್ಯಗಳ ಭಯದ ನಡುವೆಯಲ್ಲೇ ಅಧ್ಯಾತ್ಮದ, ಸತ್ಯ-ಧರ್ಮಗಳ, ನೀತಿ-ನ್ಯಾಯಗಳ ಧ್ವನಿ ವ್ಯಾಪಿಸತೊಡಗುತ್ತದೆ. ಆಧುನಿಕ ವಿಚಾರ, ಆವಿಷ್ಕಾರ, ವಿಜ್ಞಾನಗಳ ಮಧ್ಯೆ ಸನಾತನ ಸತ್ಯ, ಪುರಾತನ ಧರ್ಮ ಮತ್ತೆ ಹೊಸದಾಗಿ ಕಂಗೊಳಿಸುತ್ತದೆ. ಏನಿದರ ರಹಸ್ಯ?

### ಎರಡು ಬಗೆಯ ಚಲನೆಗಳು

ಜಗತ್ತು ಎರಡು ಬಗೆಯ ಚಲನೆಗಳನ್ನು ಕಂಡಿದೆ: ಹೊಸತನ್ನು ಕಾಣುವ, ಹೊಸತನ್ನು ಕಟ್ಟುವ ಭರದಲ್ಲಿ ಹಳೆಯದೆಲ್ಲವನ್ನೂ ಕೆಡವಿಹಾಕುವ ಉತ್ಸಾಹ. ಈ ಚಲನೆಯು ಅದಮ್ಯ ತುಡಿತದ ಭರ ದಲ್ಲಿ ಅನೇಕ ಬಾರಿ ಆಕ್ರಮಣಕಾರಿ ಮನೋಭಾವವನ್ನು ತೋರಿದೆ. ಭಾವುಕತೆಯ, ಸಾಮ್ರಾಜ್ಯಶಾಹಿ ಮನೋಭಾವದ ತೀವ್ರಗಾಮಿತ್ವ ಅನೇಕ ವೇಳೆ ಈ ಬಗೆಯ ಚಲನೆಗೆ ಪ್ರೇರಕವಾಗಿದೆ. ಮನುಕುಲದ ಸಮಗ್ರ ಏಳಿಗೆಯನ್ನು ಹಾಗೂ ಮಾನವೀಯ ಮೌಲ್ಯದ ದೃಷ್ಟಿಯನ್ನು ಅದು ಮಸುಕಾಗಿಸಿದೆ. ಪ್ರಪಂಚದ ಬಹುಭಾಗವನ್ನು ವ್ಯಾಪಿಸುವ, ಬಹುಜನರನ್ನು ಪ್ರಭಾವಿಸುವ ಈ ಚಲನೆಗಳು ಇತಿಹಾಸದಲ್ಲಿ ಹಲವು ಬಾರಿ 'ಕ್ರಾಂತಿ'ಯೆನಿಸಿವೆ: ಕೈಗಾರಿಕಾ ಕ್ರಾಂತಿ, ಪುನರುತ್ಥಾನ, ರಷ್ಯದ ಕ್ರಾಂತಿ, ವೈಜ್ಞಾನಿಕ ಕ್ರಾಂತಿ ಇತ್ಯಾದಿ. ಹೊಸತನ್ನು ಕಟ್ಟುವ ಭರದಲ್ಲಿ ಹಳೆಯ ಅನೇಕ ಅಮೂಲ್ಯ ಸೊತ್ತನ್ನು ಕಳೆದುಕೊಂಡ ಅನುಭವವೂ ನಮಗಿದೆ. ಹೊಸ ಆವಿಷ್ಕಾರಗಳ ಭವ್ಯಮಹಲುಗಳ ಹಿಂದೆ, ಕಸದರಾಶಿಯಲ್ಲಿ ಭೂಗತವಾದ ಅಮೂಲ್ಯ ರತ್ನಭಂಡಾರ — ಪಾಪ, ಮನುಕುಲದ ಪಾಡನ್ನು ನೋಡಿ ಮೂಕವಾಗಿ ಅತ್ತದ್ದೂ ಇದೆ. ಇದು ಒಂದು ಬಗೆಯ ಚಲನೆ.

ಇನ್ನೊಂದು ಬಗೆಯ ಚಲನೆ ವಿರುದ್ಧ ದಿಕ್ಕಿನತ್ತ ಸಾಗುವುದು: ಹೊಸತು ಬರಲಿ; ನವೀನ ಜ್ಞಾನ, ಆವಿಷ್ಕಾರ, ಬದಲಾವಣೆ ಎಲ್ಲವೂ ಸ್ವಾಗತಾರ್ಹವೆ. ಆದರೆ ಅದು ನಮ್ಮ ಈಗಿನ ಪ್ರಪಂಚ ವನ್ನು ಕೆಡವಿ, ಅದರ ತಿಪ್ಪೆಯ ಮೇಲೆ ಕಟ್ಟಬೇಕಾದದ್ದಲ್ಲ; ಬದಲಾವಣೆ ಏನಿದ್ದರೂ ಪ್ರಪಂಚ ಸೌಧವನ್ನು ಇನ್ನಷ್ಟು ಬಲ ಪಡಿಸುವಂಥದಾಗಿರಬೇಕು. ಏಕೆಂದರೆ, ಒಂದು ಬಾರಿ ಈ ಸೌಧ ಉರುಳಿ ಬಿದ್ದಿತೆಂದರೆ ಅನೇಕ ಅಮೂಲ್ಯ ಸಂಗತಿಗಳನ್ನು ನಾವು ಶಾಶ್ವತವಾಗಿ ಕಳೆದುಕೊಳ್ಳುವೆವು. ಅಂದರೆ ಬದಲಾವಣೆ, ಹೊಸತನ ಬೇಡವೆ? ಖಂಡಿತ ಬೇಕು. ಆದರೆ ಎಷ್ಟೋ ಕಾಲದಿಂದ ಬೆಳೆದು ಬಂದಿರುವ ಪರಂಪರೆ, ಸಂಸ್ಕೃತಿ, ಜ್ಞಾನವೈವಿಧ್ಯಗಳು ನಾಶವಾಗ ದಂತೆ ಈ ಬದಲಾವಣೆಗಳು ಬರಲಿ. ಮನುಕುಲ ನಿಂತಿರುವುದು ಎಷ್ಟೋ ಕಾಲದಿಂದ ಬೆಳೆದು ಬಂದಿರುವ ಪ್ರಕೃತಿ ನಿಯಮಗಳಿಂದ; ಅಂತೆಯೇ ಅನಾದಿ ಕಾಲದಿಂದ ಮಾನವನು ಕಂಡುಕೊಂಡ ಸನಾತನ ಮೌಲ್ಯಗಳಿಂದ. ಇವುಗಳಿಗೆ ವಿರುದ್ಧ ಹೋಗದೆ, ಅವುಗಳ ಸತ್ವವನ್ನು ಹೀರಿಕೊಂಡು ನಾವು ಮುನ್ನಡೆಯಬೇಕು. ಎಲ್ಲ ಬದಲಾವಣೆಗಳೂ ಹಳೆಯ ಅಡಿಪಾಯದ ಮೇಲೆ ಉಂಟಾಗಬೇಕು. ಆದರೆ ಅಡಿಪಾಯವನ್ನೇ ನಾಶಮಾಡುವುದು ವಿನಾಶಕರ. ಎಲ್ಲ ಬದಲಾವಣೆಗಳ ಹಿಂದೆ ಸತ್ಯ, ಶಾಂತಿ, ಆನಂದ, ಪ್ರೀತಿಯಂತಹ ಶಾಶ್ವತ ಮೌಲ್ಯಗಳು ನಿಂತಿದ್ದರೆ ಮಾತ್ರ ಜಗತ್ತು ಆರೋಗ್ಯಕರ ವಾಗಿಯೂ ಸುರಕ್ಷಿತವಾಗಿಯೂ ಇರಬಲ್ಲದು. ಈ ದಿಕ್ಕಿನಲ್ಲಿ ಚಿಂತಿ ಸುತ್ತ, ತಮ್ಮೆಲ್ಲ ಚಟುವಟಿಕೆಗಳನ್ನು ಇದಕ್ಕನುಗುಣವಾಗಿ ನಡೆಸುವ ಹಲವು ಚಳುವಳಿಗಳು ಕೂಡ ಅತ್ಯಂತ ಪ್ರಭಾವಶಾಲಿಯಾಗಿವೆ.

ಈ ಎರಡು ಚಲನೆಗಳ ನಡುವೆ ಹಲವು ಬಾರಿ ತಾತ್ತ್ವಿಕ ಸಂಘರ್ಷ ನಡೆದಿವೆ; ಅನೇಕ ವೇಳೆ ಅವು ದೊಡ್ಡ ಅನಾಹುತಗಳಲ್ಲಿ ಕೊನೆಗೊಂಡಿವೆ. ವಿಜ್ಞಾನ, ತಂತ್ರಜ್ಞಾನ, ಉದ್ಯಮಗಳು, ಹತ್ತು ಹಲವು ರಾಜಕೀಯ-ಸಾಮಾಜಿಕ ಬದಲಾವಣೆಗಳು ಈ ಎರಡು ಬಗೆಯ ಚಲನೆಗಳಿಂದ ಕೂಡಿವೆ; ಹಲವೆಡೆ ನಡೆಯುವ ಹಲವು ಬಗೆಯ ಬೌದ್ಧಿಕ ಚರ್ಚೆ, ವಿಚಾರ ವಿನಿಮಯಗಳು ಈ ಚಲನೆಗಳನ್ನು ಸಮರ್ಥಿಸಿ ಅಥವಾ ವಿರೋಧಿಸಿ ನಡೆಯುತ್ತವೆ. ಇವೆರಡರ ವ್ಯತ್ಯಾಸವಿಷ್ಟೆ: ಒಂದು ಹೊಸತನ್ನಷ್ಟೇ ಬಯಸುತ್ತದೆ, ವಿನಾಶವನ್ನು ಲೆಕ್ಕಿಸದು. ಇನ್ನೊಂದು, ಹಳೆಯದನ್ನು ಬಲಪಡಿಸುತ್ತ ಹೊಸತನ್ನು ಕಂಡುಕೊಳ್ಳುತ್ತದೆ.

ಕೇವಲ ಏಳಿಗೆ, ಅಭಿವೃದ್ಧಿ ಹಾಗೂ ಹೊಸ ಆವಿಷ್ಕಾರಗಳಿಂದ ಮಾತ್ರವೇ ಮಾನವನ ಒಟ್ಟು ಜೀವನವು ಶಾಂತಿ, ನೆಮ್ಮದಿ, ಆನಂದಗಳನ್ನು ಹೊಂದಲಾರದೆಂಬ ಸತ್ಯ ಮಾನವನಿಗೆ ಅರ್ಥವಾದುದು ತುಂಬಾ ತಡವಾಗಿ. ಎರಡು ಮಹಾಯುದ್ಧಗಳ ನಂತರ ಜಾಗತಿಕ ಮಟ್ಟದಲ್ಲಿ ಶಾಂತಿ, ಸೌಹಾರ್ದಗಳ ಅಗತ್ಯ ಎಷ್ಟು ಮುಖ್ಯವೆಂಬುದನ್ನು ಎಲ್ಲ ದೇಶಗಳೂ ಕಂಡುಕೊಂಡವು. ಇದಕ್ಕನುಗುಣವಾಗಿ

ವಿಶ್ವಸಂಸ್ಥೆ, ಅಂತರರಾಷ್ಟ್ರೀಯ ಸೌಹಾರ್ದ – ಸ್ನೇಹಸಂಬಂಧಗಳ ಮೂಲಕ ಯುದ್ಧವೆಂಬ ಮಹಾಮಾರಿಯನ್ನು ತಡೆಯುವ ಪ್ರಯತ್ನಗಳು ನಡೆದವು. ಮಾರಕಾಸ್ತ್ರಗಳ ಬಳಕೆಯಿಂದ ಮಾನವ, ಪ್ರಾಣಿ–ಸಸ್ಯಸಂಕುಲ ಹಾಗೂ ಒಟ್ಟು ಪ್ರಕೃತಿಯ ಮೇಲೆ ಉಂಟಾಗುವ ದುಷ್ಪರಿಣಾಮ ನಮ್ಮೆಲ್ಲರ ಬದುಕನ್ನು, ಭೀಕರ ನಾಶದತ್ತ ಹೊರಳಿಸುವುದು ಎಂಬ ಅರಿವು ಎಲ್ಲೆಡೆ ಹಬ್ಬಿತು. ಆದರೆ ಈ ಎಲ್ಲ ಅರಿವಿನ ಫಲವಾಗಿ ವಿವಿಧ ದೇಶಗಳ ನಡುವೆ ಉಂಟಾಗಬೇಕಿದ್ದ ಸ್ನೇಹ–ಸಂಬಂಧಗಳು ಇತ್ತೀಚೆಗೆ ಅಪಾಯಕಾರಿ ಮಟ್ಟವನ್ನು ತಲುಪಿರುವುದು ಅತ್ಯಂತ ಆತಂಕವನ್ನು ಮೂಡಿಸಿರುವ ಸಂಗತಿಯಾಗಿದೆ.

## ಧಾರ್ಮಿಕ ಸೆಳೆತಗಳು

ಇಷ್ಟೊಂದು ಆಧುನಿಕ ಬೆಳವಣಿಗೆಗಳ ನಡುವೆಯೂ ಪ್ರಪಂಚದ ವಿವಿಧ ಚಲನೆಗಳನ್ನು ನಿರ್ಧರಿಸುವಲ್ಲಿ ಧರ್ಮವು ಪ್ರಧಾನ ಪಾತ್ರ ವಹಿಸರುವುದು ಗಮನಿಸಬೇಕಾದ ಸಂಗತಿಯಾಗಿದೆ. ಹಿಂದೆ ಹೇಳಿರುವ ಎರಡು ಚಲನೆಗಳು ಧಾರ್ಮಿಕ ಕ್ಷೇತ್ರದಲ್ಲಿ ವಿಭಿನ್ನ ರೀತಿಯಲ್ಲಿ ಕೆಲಸ ಮಾಡುತ್ತದೆ. ಮೇಲ್ನೋಟಕ್ಕೆ ಎಲ್ಲ ಧರ್ಮಗಳೂ ವಿಶ್ವಶಾಂತಿ, ವಿಶಾಲಭಾವನೆ, ಮಾನವೀಯತೆ, ಭ್ರಾತೃತ್ವವೇ ಮುಂತಾದ ಭಾವನೆಗಳನ್ನು ಹರಡುವುದಾದರೂ, ಈ ಧರ್ಮಗಳೇ ಪರಸ್ಪರ ಪೈಪೋಟಿ, ದ್ವೇಷ, ಮತಾಂತರ, ಧರ್ಮಯುದ್ಧ ಹಾಗೂ ಭಯೋತ್ಪಾದನೆಗಳಲ್ಲಿ ತೊಡಗಿರುವುದು ವಾಸ್ತವ ಸತ್ಯ. ಸಾಮಾಜಿಕ, ರಾಜಕೀಯ ಬದಲಾವಣೆಗಳಲ್ಲೂ, ಶಿಕ್ಷಣ, ಸಂಸ್ಕೃತಿ, ಆರ್ಥಿಕ ಚಟುವಟಿಕೆ ಮೊದಲಾದ ಕ್ಷೇತ್ರಗಳಲ್ಲೂ ಧಾರ್ಮಿಕ ಹಿತಾಸಕ್ತಿಗಳು ಬಲವಾದ ಹಿಡಿತವನ್ನು ಹೊಂದಿರುವುದು ಎಲ್ಲೆಡೆ ಕಂಡುಬರುತ್ತಿವೆ. 'ಇಷ್ಟೆಲ್ಲ ಅನಾಹುತಗಳನ್ನು ಸೃಷ್ಟಿಸುತ್ತಿರುವ ಧರ್ಮಗಳು ಯಾಕಾದರೂ ಇರಬೇಕು? ಅವುಗಳನ್ನು ನಿರ್ಮೂಲನ ಮಾಡಬಾರದೆ?' ಎಂದು ಪ್ರಶ್ನಿಸುವವರು ಇದ್ದಾರೆ. ಅಂತೆಯೇ, ಜಗತ್ತಿನ ಎಲ್ಲ ಸಮಸ್ಯೆಗಳಿಗೆ ಪರಿಹಾರವನ್ನು ಕೇವಲ ಮಾನವವನು ಕಂಡುಕೊಳ್ಳಲಾರ; ಅದಕ್ಕೆ ಧಾರ್ಮಿಕ–ಆಧ್ಯಾತ್ಮಿಕ ಹಿನ್ನೆಲೆಯ ಪ್ರೇರಣೆ ಅತ್ಯಗತ್ಯ ಎಂದು ತಮ್ಮ ತಮ್ಮ ಧರ್ಮಗಳನ್ನು ಸಮರ್ಥಿಸಿಕೊಳ್ಳುವವರೂ ಇದ್ದಾರೆ. ಈ ಹಿನ್ನೆಲೆಯಲ್ಲಿ ಜಗತ್ತಿನ ಚಲನೆಗಳನ್ನು ಕಾಣಬೇಕು. ಮೇಲ್ನೋಟಕ್ಕೆ ಧರ್ಮಗಳು ವಿನಾಶಕಾರಿಯಾಗಿ ಕಂಡುಬರುತ್ತವೆ; ಆಂತರ್ಯದಲ್ಲಿ ಅವು ಶಾಂತಿ, ಸಾಮರಸ್ಯ, ವಿಶ್ವ ಭ್ರಾತೃತ್ವವನ್ನು ಹರಡುವ ಮಹಾಶಕ್ತಿಯಾಗಿ ಕೆಲಸ ಮಾಡುತ್ತವೆ. ಈ ದೃಷ್ಟಿಯಿಂದ ವಿಶ್ಲೇಷಿಸುತ್ತಾ, ಧರ್ಮಗಳ ನಿಜವಾದ ತಿರುಳೇನು, ಜಗತ್ತಿಗೆ ಅವು ನೀಡಿರುವ ಹೊಸ ಅರಿವು ಎಂತಹುದು, ಸರಿಯಾದ ದಿಕ್ಕಿನಲ್ಲಿ ಈ ಧಾರ್ಮಿಕ ಮೌಲ್ಯಗಳನ್ನು ಅಳವಡಿಸಿಕೊಂಡು ಜಗತ್ತನ್ನು ಪರಿಪೂರ್ಣ ಶಾಂತಿಯೆಡೆಗೆ ಕೊಂಡೊಯ್ಯುವ ಮಾರ್ಗವೇನು ಎಂಬುದನ್ನು ನಾವು ಕಂಡುಕೊಳ್ಳಬೇಕು.

## ನಿಜವಾದ ಧರ್ಮ

''ಧರ್ಮವು ಮಾನವಮೃಗವನ್ನು ದೇವನನ್ನಾಗಿ ಮಾಡಬಲ್ಲುದು. ಅದು ಮಾನವನಿಗೆ ಅನಂತತ್ವವನ್ನು ತರಬಲ್ಲುದು. ಮಾನವ ಸಮಾಜದಿಂದ ಧರ್ಮವನ್ನು ಕಳೆದುಬಿಟ್ಟರೆ ಇನ್ನು ಉಳಿಯುವುದೇನು? ಮೃಗಸದೃಶ ಕೊಂಪೆಯಲ್ಲದೆ ಮತ್ತೇನೂ ಇಲ್ಲ'' ಎನ್ನುತ್ತಾರೆ ಸ್ವಾಮಿ ವಿವೇಕಾನಂದರು *(ಕೃತಿಶ್ರೇಣಿ, ಸಂ ೬, ಪು: ೪೧೧)*. ಧರ್ಮದ ತಿರುಳೇನು ಎಂಬುದನ್ನು ಹಲವು ತಾತ್ತ್ವಿಕ ದೃಷ್ಟಿಕೋನಗಳಿಂದ ಸ್ವಾಮೀಜಿ ವಿವರಿಸುತ್ತಾರೆ. ಆತ್ಮಸಾಕ್ಷಾತ್ಕಾರವೇ ನಿಜವಾದ ಧರ್ಮ, ಅದರಿಂದಲೇ ಎಲ್ಲ ನೈತಿಕತೆ, ಆಧ್ಯಾತ್ಮಿಕತೆ ಹೊರಡುವುದು ಎಂಬುದು ಅವರ ಬೋಧನೆಗಳ ಸಾರವಾಗಿದೆ.

ಧರ್ಮದಲ್ಲಿ ಮಾತ್ರವೇ ಶಾಶ್ವತ ಸತ್ಯ, ಶಾಶ್ವತ ಶಾಂತಿ ಹಾಗೂ ಶಾಶ್ವತ ಆನಂದದ ಭರವಸೆಯನ್ನು ನೀಡಲಾಗಿದೆ. ಅವ್ಯಕ್ತವಾಗಿರುವ ಶಕ್ತಿಯನ್ನು ದೇವರೆಂದೂ, ಸತ್ಯವೆಂದೂ, ಆದರ್ಶವೆಂದೂ ಆರಾಧಿಸುವ ಮೂಲಕ, ಜ್ಞಾನೋಪಾಸನೆಯ ಮೂಲಕ ಹಾಗೂ ಸಾಧನೆ – ತಪಸ್ಸುಗಳ ಮೂಲಕ ಅಂಥ ಮಹೋನ್ನತ ಸತ್ಯವನ್ನು ಅರಿತುಕೊಳ್ಳಬಹುದಾಗಿದೆ. ವೈಯಕ್ತಿಕ ನೆಲೆಯಲ್ಲಿ ಮಾತ್ರ ಈ ಆದರ್ಶಗಳನ್ನು ಪರಿಪೂರ್ಣವಾಗಿ ಹೊಂದಬಹುದಾದರೂ, ಧಾರ್ಮಿಕ ತತ್ತ್ವಗಳ ಅನುಷ್ಠಾನ ಸಾಮಾಜಿಕ, ಕೌಟುಂಬಿಕ ವಲಯಗಳ ಮೂಲಕ ಒಂದು ರಾಷ್ಟ್ರದ ಪರಿವರ್ತನೆಗೆ, ಆ ಮೂಲಕ ಒಟ್ಟು ಸಮಾಜದ ಶಾಂತಿ, ಆನಂದಗಳಿಗೆ ಕಾರಣವಾಗಬಹುದು ಎಂಬುದನ್ನು ವಿವಿಧ ಸಂಸ್ಕೃತಿ, ನಾಗರಿಕತೆಗಳು ತೋರಿಸಿಕೊಟ್ಟಿವೆ. ಗುರಿಯನ್ನು ತಲುಪುವ ವಿವಿಧ ಹಂತಗಳಲ್ಲಿ ಹಲವು ಬಗೆಯ ಹೋರಾಟಗಳಿವೆ; ಅವಕ್ಕೆ ವೈಯಕ್ತಿಕ ಹಾಗೂ ಸಾಮಾಜಿಕ ಮುಖಗಳಿವೆ. ಆದರೆ ಅವೆಂದೂ ಒಟ್ಟು ಜನಜೀವನವನ್ನು ಬಲಿ ತೆಗೆದುಕೊಳ್ಳದಂತೆ ನೋಡಿಕೊಳ್ಳುವ ಜವಾಬ್ದಾರಿ ಆಯಾ ಸಮಾಜಕ್ಕಿರಬೇಕು. ಅವತಾರ ಪುರುಷರ ಹಾಗೂ ಆಧ್ಯಾತ್ಮಿಕ ಮಹಾಪುರುಷರ ಮಾರ್ಗವೆಂದೂ ಸಂಕುಚಿತ ಭಾವನೆಗಳಿಂದ ಕೂಡಿರಲಿಲ್ಲ ; ಅವರ ವಿಶಾಲಭಾವನೆ ಹಾಗೂ ವಿಶ್ವಶಾಂತಿಯ ಸಂದೇಶಗಳು ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳ್ಳಬೇಕು. ಸಮಾಜವು ಸಮೃದ್ಧವೂ, ಶಾಂತಿದಾಯಕವೂ, ಆಧ್ಯಾತ್ಮಿಕವೂ ಆಗುವುದು ಇದರಿಂದಲೇ ಆಗಿದೆ. ಅಂಥ ಮಹಾತ್ಮರ ದಿವ್ಯ ಭಾವನೆಗಳನ್ನು ಸರಿಯಾಗಿ ಅರಿತುಕೊಳ್ಳಲಾಗದ ಹಾಗೂ ಆ ಭಾವನೆಗಳನ್ನು ತಮ್ಮ ಸಂಕುಚಿತ ಉದ್ದೇಶಗಳಿಗೆ ಬಳಸಿಕೊಳ್ಳುವ ಮತಾಂಧರಿಂದ ಸಮಾಜಕ್ಕೆ ವಿಶೇಷ ಹಾನಿಯುಂಟಾಗುವುದು. ಪ್ರಪಂಚದಲ್ಲಿ ಉಂಟಾಗಿರುವ ಎಲ್ಲ ಧಾರ್ಮಿಕ ಹಾನಿಗಳಿಗೆ ಕಾರಣ ಅವತಾರ ಪುರುಷರಲ್ಲ, ಪ್ರವಾದಿಗಳಲ್ಲ, ಋಷಿಮುನಿಗಳೋ, ಸಾಧುಸಂತರೋ ಅಲ್ಲ. ವೈಯಕ್ತಿಕ–ಸಾಮಾಜಿಕ ಬದುಕಿನಲ್ಲಿ ಧರ್ಮವನ್ನು ಪ್ರಾಮಾಣಿಕವಾಗಿ ಅನುಸರಿಸುತ್ತಿರುವ ಜನಸಾಮಾನ್ಯರೂ ಅಲ್ಲ. ತಪ್ಪುತಿಳುವಳಿಕೆ, ಅಜ್ಞಾನಗಳಿಂದ ಧರ್ಮದ ಅಮೂಲ್ಯ ಸತ್ಯಗಳನ್ನು ಹೀನ ಕೃತ್ಯಗಳಿಗಾಗಿ ಬಳಸುವ ಅಲ್ಪರು ಮಾತ್ರವೇ ಎಲ್ಲ ಅನಾಹುತಗಳಿಗೆ ನಿಜವಾಗಿ ಕಾರಣರಾಗುತ್ತಾರೆ. ಎಲ್ಲ ಸಮಾಜಗಳಲ್ಲೂ ಕಂಡು ಬರುವ ಪ್ರಜ್ಞಾವಂತರು ಇಂಥ ಶಕ್ತಿಗಳಿಂದ ಧರ್ಮ, ಅಧ್ಯಾತ್ಮವನ್ನು ರಕ್ಷಿಸಬೇಕು. ಆಗ ಸಮಾಜದ ಚಲನೆಗಳು ಸರಿಯಾದ ದಾರಿಯಲ್ಲಿ ಮುನ್ನಡೆಯುವುವು, ಧರ್ಮಗಳಲ್ಲಿ ಹೇಳಿರುವ ತತ್ತ್ವಗಳು ಶಾಂತಿ, ಪ್ರೇಮ, ಆನಂದಗಳನ್ನು ನೀಡಬಲ್ಲವು. ''ಶಾಶ್ವತ ಶಾಂತಿ ಭಗವತ್ ಸಾಕ್ಷಾತ್ಕಾರದಿಂದ ಮಾತ್ರ ಸಾಧ್ಯ'' ಎಂಬ ಮಾತು ಪ್ರಪಂಚದಲ್ಲಿ ಸತ್ಯವೆನಿಸುವುದು. ❁

# ನಿರ್ಲಿಪ್ತತೆ



✿ ಸಂಸಾರದಲ್ಲಿ ನಿರ್ಲಿಪ್ತತೆಯಿಂದ ಇರಬೇಕಾದರೆ ಕಿಂಚಿತ್ ಸಾಧನೆಯನ್ನು ಮಾಡಲೇಬೇಕಾಗುತ್ತದೆ. ಸ್ವಲ್ಪ ಕಾಲವನ್ನು ನಿರ್ಜನ ಪ್ರದೇಶದಲ್ಲಿ ಕಳೆಯಬೇಕಾಗುತ್ತದೆ – ಒಂದು ವರ್ಷವನ್ನೊ, ಆರು ತಿಂಗಳನ್ನೊ, ಮೂರು ತಿಂಗಳನ್ನೊ, ಕೊನೆಗೆ ಒಂದು ತಿಂಗಳನ್ನಾದರೂ ಸರಿಯೆ. ಆ ಏಕಾಂತವಾಸದಲ್ಲಿ ಭಗವಂತನ ಕಡೆ ಮನಸ್ಸನ್ನು ತಿರುಗಿಸಿ, ಅತ್ಯಂತ ವ್ಯಾಕುಲಚಿತ್ತದಿಂದ ಆತನ ಪಾದಪದ್ಮಗಳಲ್ಲಿ ತನಗೆ ಭಕ್ತಿಯುಂಟಾಗುವಂತೆ ಆತನಿಗೆ ಸರ್ವದಾ ಪ್ರಾರ್ಥನೆ ಮಾಡಿಕೊಳ್ಳುತ್ತಿರಬೇಕು. ಮನಸ್ಸಿನಲ್ಲೇ ಹೇಳಿಕೊಳ್ಳುತ್ತಿರಬೇಕು, 'ನನ್ನವರು ಎಂಬುವವರು ಈ ಸಂಸಾರದಲ್ಲಿ ಯಾರೂ ಇಲ್ಲ. ಯಾರನ್ನು ನಾನು, ನನ್ನವರು ಅಂತ ಭಾವಿಸುತ್ತಿದ್ದೇನೋ ಅವರ ಬಾಳುವೆ ಒಂದೆರಡು ದಿವಸದ್ದು ಮಾತ್ರವೆ. ಭಗವಂತನೊಬ್ಬನೇ ಏಕಮಾತ್ರ ನನ್ನ ಸ್ವಂತದವ, ಆತನೇ ನನ್ನ ಸರ್ವಸ್ವ. ಅಯ್ಯೋ! ಆತನನ್ನು ನಾನು ಪಡೆದುಕೊಳ್ಳುವ ಬಗೆ ಹೇಗೆ?' ಅಂತ.

✿ ಭಕ್ತಿಯನ್ನು ಪಡೆದುಕೊಂಡ ನಂತರ ಬೇಕಾದರೆ ಸಂಸಾರದಲ್ಲಿ ಇರಬಹುದು. ಇದು ಕೈಗೆ ಎಣ್ಣೆ ಸವರಿಕೊಂಡು ಹಲಸಿನ ಹಣ್ಣನ್ನು ಬಿಡಿಸಿದ ಹಾಗೆ. ಅದರ ಅಂಟು ಕೈಗೆ ಅಂಟದು. ಸಂಸಾರವೇ ನೀರು; ಮನಸ್ಸೇ ಹಾಲು. ಹಾಲನ್ನು ನೀರಿಗೆ ಹೊಯ್ದರೆ, ಅದು ನೀರಿನಲ್ಲಿ ಬೆರೆತುಹೋಗಿ ಬಿಡುತ್ತದೆ. ಅದಕ್ಕಾಗಿಯೇ ಮೊದಲು ಹಾಲಿಗೆ ಹೆಪ್ಪು ಹಾಕಿ ಅದನ್ನು ನಿರ್ಜನ ಪ್ರದೇಶದಲ್ಲಿ ಇಡಬೇಕಾಗುತ್ತದೆ. ಮೊಸರಾದ ನಂತರ ಅದನ್ನು ಕಡೆದು ಬೆಣ್ಣೆ ತೆಗೆಯಬೇಕು. ಬೆಣ್ಣೆ ತೆಗೆದು ಅದನ್ನು ನೀರಿನಲ್ಲಿ ಇಟ್ಟರೆ, ಆಗ ಅದು ನೀರಿನೊಡನೆ ಬೆರೆತುಕೊಳ್ಳದು; ನಿರ್ಲಿಪ್ತವಾಗಿ ನೀರಿನ ಮೇಲೆ ತೇಲುತ್ತಿರುತ್ತದೆ.

✿ ಬ್ರಾಹ್ಮಸಮಾಜದ ಕೆಲವು ಮಂದಿ ಸದಸ್ಯರು ನನಗೆ ಹೇಳಿದರು, 'ಮಹಾಶಯರೆ, ನಮ್ಮದು ಜನಕರಾಜನ ಮಾರ್ಗ, ಆತನಂತೆ ನಿರ್ಲಿಪ್ತತೆಯಿಂದ ನಾವು ಸಂಸಾರದಲ್ಲಿರಬೇಕೆಂದಿದ್ದೇವೆ.' ನಾನು ಹೇಳಿದೆ: ನಿರ್ಲಿಪ್ತತೆಯಿಂದ ಸಂಸಾರದಲ್ಲಿರುವುದು ಬಹಳ ಕಠಿಣ, ಬಾಯಿಮಾತಿನಿಂದ ಜನಕರಾಜನಾಗುವುದಕ್ಕೆ ಆಗುವುದಿಲ್ಲ. ಜನಕ ಶೀರ್ಷಾಸನದಲ್ಲಿ ನಿಂತು ಎಷ್ಟೊಂದು ಕಾಲ ತಪಸ್ಸು ಮಾಡಿದ ಏನು ಕತೆ! ನೀವೇನು ಅಂಥ ಕಠೋರ ತಪಸ್ಸು ಮಾಡಬೇಕಾಗಿಲ್ಲ. ಆದರೆ ನಿಮಗೆ ಸಾಧನೆ ಆವಶ್ಯಕ, ಏಕಾಂತವಾಸ ಆವಶ್ಯಕ. ಏಕಾಂತವಾಸ ಮಾಡಿ, ಜ್ಞಾನ ಪಡೆದುಕೊಂಡು, ಭಕ್ತಿ ಪಡೆದುಕೊಂಡು, ಬಳಿಕ ಬೇಕಾದರೆ ಸಂಸಾರದಲ್ಲಿ ಇರಬಹುದು. ನಿರ್ಜನ ಪ್ರದೇಶದಲ್ಲಿ ಹೆಪ್ಪು ಹಾಕಿದ ಹಾಲನ್ನು ಇಟ್ಟು ಮೊಸರು ಮಾಡಿಕೊಳ್ಳ ಬೇಕಾಗುತ್ತದೆ. ಸ್ಥಳ ಬದಲಾಯಿಸುತ್ತಲೊ ಅಥವಾ ಆಗಾಗ ಅಲ್ಲಾಡಿಸುತ್ತಲೊ ಇದ್ದರೆ ಅದು ಮೊಸರಾಗದು.

✿ ಜನಕ ನಿರ್ಲಿಪ್ತನಾಗಿದ್ದುದರಿಂದ ಆತನನ್ನು ವಿದೇಹಿ ಅಂತಲೂ ಜನ ಕರೆಯುತ್ತಿದ್ದರು — ಅಂದರೆ ದೇಹಾತ್ಮಬುದ್ಧಿರಹಿತ ಎಂದು. ಸಂಸಾರದಲ್ಲಿದ್ದರೂ ಜೀವನ್ಮುಕ್ತನಾಗಿ ಓಡಾಡುತ್ತಿದ್ದ. ದೇಹಬುದ್ಧಿ ಹೋಗುವುದು ಅಂದರೆ ಅದು ಬಹಳ ದೂರದ ಮಾತು. ಬಹಳ ಸಾಧನೆ ಮಾಡಬೇಕಾಗುತ್ತದೆ.

✿ ಸಂಸಾರಾಶ್ರಮದ ಜ್ಞಾನಿ, ಸಂನ್ಯಾಸಾಶ್ರಮದ ಜ್ಞಾನಿಗೆ ದೊರಕುವ ಜ್ಞಾನ ಒಂದೇ ತರದ್ದು. ಏನೂ ತಾರತಮ್ಯವಿಲ್ಲ. ಇಬ್ಬರೂ ಜ್ಞಾನಿಗಳೆ. ಇಬ್ಬರಿಗೂ ಒಂದೇ ತರದ ಅನುಭವ. ಆದರೆ ಸಂಸಾರಾಶ್ರಮದ ಜ್ಞಾನಿ ಸ್ವಲ್ಪ ಭಯದಿಂದಿರಬೇಕಾಗುತ್ತದೆ. ಕಾಮ ಕಾಂಚನ ಮಧ್ಯದಲ್ಲಿ ಇರುವುದು ಅಂದರೆ ಸ್ವಲ್ಪ ಭಯದಿಂದಲೇ ಇರಬೇಕಾಗುತ್ತದೆ. ಕಾಡಿಗೆ ಹಚ್ಚಿರುವ ಮನೆಯಲ್ಲಿ ವಾಸಿಸಲು ಹೋದರೆ, ಎಷ್ಟೇ ಎಚ್ಚರಿಕೆಯಿಂದ ಇದ್ದರೂ ಅಲ್ಪಸ್ವಲ್ಪವಾಗಿಯಾದರೂ ಅದು ಮೈಗೆ ಹತ್ತಿಕೊಂಡೇ ಬಿಡುತ್ತದೆ.

✿ ಬೆಣ್ಣೆ ತೆಗೆದು ಹೊಸ ಮಡಕೆಯಲ್ಲಿ ಇಟ್ಟರೆ ಅದು ಕೆಟ್ಟುಹೋಗುವ ಸಂಭವವೇ ಇಲ್ಲ. ಆದರೆ ಅದನ್ನು ಮೊಸರಿನ ಮಡಕೆಯಲ್ಲಿ ಇಟ್ಟರೆ ಸ್ವಲ್ಪ ಸಂದೇಹಪಡಬೇಕಾಗುತ್ತದೆ. ಸಂಸಾರ ತ್ಯಾಗಿ ಸಂನ್ಯಾಸಿ ಬ್ರಹ್ಮಜ್ಞಾನ ಪಡೆದುಕೊಂಡರೆ, ಆತ ಮಲ್ಲಿಗೆ ಹೂವಿನಂತೆ ಯಾವ ಕರೆಯೂ ಇಲ್ಲದವನಾಗಿ ಕಾಣುತ್ತಾನೆ; ಆದರೆ ಬ್ರಹ್ಮಜ್ಞಾನ ಪಡೆದು ಸಂಸಾರವೆಂಬ ಬಾಣಲೆಯಲ್ಲಿ ಇದ್ದ ಅಂದರೆ ಆತನ ಮೈಗೆ ಒಂದು ಸ್ವಲ್ಪ ಕರೆ ಹತ್ತಬಹುದು.

✿ ಜ್ಞಾನ ಅಂತಃಪುರದವರೆಗೆ ಮಾತ್ರ ಹೋಗಬಲ್ಲದು, ಆದರೆ ಭಕ್ತಿ ಅಂತಃಪುರಕ್ಕೇನೇ ಹೋಗಬಲ್ಲದು. ಶುದ್ಧಾತ್ಮ ನಿರ್ಲಿಪ್ತ. ಆತನಲ್ಲಿ ವಿದ್ಯೆ, ಅವಿದ್ಯೆ, ಎರಡೂ ಇವೆ. ಆದರೆ ಆತ ಮಾತ್ರ ನಿರ್ಲಿಪ್ತ. ಗಾಳಿಯಲ್ಲಿ ಒಮ್ಮೆ ಸುಗಂಧ, ಒಮ್ಮೆ ದುರ್ಗಂಧ ಎರಡೂ ಬರುತ್ತವೆ, ಆದರೆ ಅದು ಮಾತ್ರ ನಿರ್ಲಿಪ್ತ.

✿ ವೇದಾಂತವಾದಿಗಳ ದೃಷ್ಟಿಯಿಂದ ಆತ್ಮ ನಿರ್ಲಿಪ್ತ. ಸುಖ, ದುಃಖ, ಪಾಪ, ಪುಣ್ಯ ಇವೇ ಮೊದಲಾದವು ಯಾವ ವಿಧದಿಂದಲೂ ಸ್ಪರ್ಶಿಸಲಾರವು. ಆದರೆ ದೇಹಾಭಿಮಾನಿಗಳಿಗೆ ಅವು ಕಷ್ಟ ಕೊಡಬಲ್ಲವು. ಹೊಗೆ ಗೋಡೆಯನ್ನು ಕಪ್ಪು ಮಾಡಬಲ್ಲದು. ಆದರೆ ಆಕಾಶಕ್ಕೆ ಅದು ಏನೂ ಮಾಡಲಾರದು.

ಶ್ರೀರಾಮಕೃಷ್ಣ ವಚನವೇದದಿಂದ

# ರಾಮನಾಥಪುರಂ ಆಶ್ರಮ – ಒಂದು ಪಕ್ಷಿನೋಟ

ಸ್ವಾಮಿ ಅಭಿರಾಮಾನಂದ

ಅನುವಾದ : ಡಾ. ಇ. ವಸಂತಕುಮಾರ್




ತಮ್ಮ ಪರಿವ್ರಾಜಕ ದಿನಗಳಲ್ಲಿ ಸ್ವಾಮಿ ವಿವೇಕಾನಂದರು ರಾಮನಾಡ್ ರಾಜರ ಅತಿಥಿಯಾಗಿದ್ದರು. ರಾಮನಾಡಿನ ಅರಮನೆಯಿದ್ದ ರಾಮನಾಥಪುರಂನಲ್ಲಿ ಇತ್ತೀಚೆಗೆ ರಾಮಕೃಷ್ಣ ಮಠದ ಶಾಖಾಕೇಂದ್ರ ಆರಂಭಗೊಂಡಿತು. ರಾಮನಾಥಪುರದ ಚಾರಿತ್ರಿಕ ಹಿನ್ನೆಲೆ, ಸ್ವಾಮಿ ವಿವೇಕಾನಂದರಿಂದ ಪ್ರಭಾವಿತರಾದ ರಾಜವಂಶ, ಅಲ್ಲಿ ಆರಂಭಗೊಂಡ ರಾಮಕೃಷ್ಣ ಮಠದ ಹಿನ್ನೆಲೆ ಇತ್ಯಾದಿ ವಿಷಯಗಳನ್ನು ಸಂಕ್ಷಿಪ್ತವಾಗಿ ವಿವರಿಸಿರುವ ಲೇಖಕರು ರಾಮಕೃಷ್ಣ ಮಠ ಹಾಗೂ ಮಿಷನ್ನಿನ ಟ್ರಸ್ಟಿಗಳೂ, ಕೊಯಮತ್ತೂರು ಮಿಷನ್ ವಿದ್ಯಾಲಯ ಹಾಗೂ ರಾಮನಾಥಪುರಂ ಮಠದ ಅಧ್ಯಕ್ಷರೂ ಆಗಿದ್ದಾರೆ.

### ಸೇತುಪತಿ ವಂಶಸ್ಥರು

ಸೇತುಪತಿ ರಾಜವಂಶಸ್ಥರು ರಾಮನಾಥಪುರವನ್ನು ಅನಾದಿ ಕಾಲದಿಂದ ಆಳುತ್ತ ಬಂದಿದ್ದಾರೆ. ಭಗವಾನ್ ಶ್ರೀರಾಮಚಂದ್ರನು ನಿರ್ಮಿಸಿದ ಸೇತು ಮತ್ತು ಶ್ರೀರಾಮಚಂದ್ರನಿಂದ ಪೂಜಿಸಲ್ಪಟ್ಟ ಮಹಾದೇವ ಶಿವನ ರಾಮನಾಥಪುರ ದೇವಸ್ಥಾನವನ್ನು ರಕ್ಷಿಸಿಕೊಂಡು ಬಂದ ಕೀರ್ತಿ ಅವರದಾಗಿದೆ. ಯಾವ ಶಿಲಾಸನದ ಮೇಲೆ ಭಗವಾನ್ ಶ್ರೀರಾಮಚಂದ್ರನು ಅವರ ಪೂರ್ವಜರನ್ನು 'ಸೇತುಪತಿ' ಎಂದು ಮೊದಲ ಬಾರಿ ಸ್ಥಾಪಿಸಿದನೋ ಅದನ್ನು ಸ್ವಾಮಿ ವಿವೇಕಾನಂದರು ರಾಮನಾಥಪುರದ ಅರಮನೆಯಲ್ಲಿ ಗುರುತಿಸಿದರು. ಸಿಂಹಾಸನದಂತೆ ಕಾಣುವ ಈ ಶಿಲೆಯನ್ನು ಈಗಲೂ ನೋಡಬಹುದು. ಅದನ್ನು ರಾಜಮನೆತನದ ಪಟ್ಟಾಭಿಷೇಕದಂತಹ ವಿಶೇಷ ಸಮಾರಂಭಗಳಲ್ಲಿ ಬಳಸುತ್ತಾರೆ.

ಕಿಳವನ್ ಸೇತುಪತಿಯವರ ಕಾಲದಲ್ಲಿ (ಕ್ರಿ.ಶ. ೧೬೭೩–೧೭೦೮) ರಾಮನಾಥಪುರ ಅವರ ರಾಜ್ಯದ ರಾಜಧಾನಿಯಾಯಿತು ಎಂದು ಹೇಳುತ್ತಾರೆ. ೧೭೭೨ ರಲ್ಲಿ ಕಮಾಂಡರ್ ಸ್ಟೀವನ್ಸನ್ ಅವರ ನೇತೃತ್ವದಲ್ಲಿ ಬ್ರಿಟಿಷರು ಮತ್ತು ಮೊಗಲರು ಒಟ್ಟಾಗಿ ಸೇರಿ ರಾಮನಾಥಪುರ ರಾಜ್ಯವನ್ನು ವಶಪಡಿಸಿಕೊಂಡರು. ರಾಜ್ಯವನ್ನು ನಡೆಸಿಕೊಂಡು ಹೋಗುವ ಜವಾಬ್ದಾರಿಯನ್ನು ಕರ್ನಲ್ ಮಾರ್ಟಿನ್ ಅವರಿಗೆ ವಹಿಸಲಾಯಿತು. ಕರ್ನಲ್ ಮಾರ್ಟಿನ್ ವಾಸವಿದ್ದ ಬಂಗಲೆಯನ್ನು ಕರ್ನಲ್ ಬಂಗಲೆ ಎಂದೂ, ಅದು ಇದ್ದ ಬೀದಿಯನ್ನು ಕರ್ನಲ್ ಬಂಗಲೆ ಬೀದಿ ಎಂದೂ ಕರೆಯುತ್ತಾರೆ. ಕರ್ನಲ್ ಈ ಬಂಗಲೆಯಲ್ಲಿ ೧೭೯೦ ರಿಂದ ೧೮೩೦ ರವರೆಗೆ ವಾಸವಿದ್ದು ೭೦ನೆ ವಯಸ್ಸಿನಲ್ಲಿ ಕಾಲವಾದರು. ಅಲ್ಲಿಯೇ ಹತ್ತಿರವಿದ್ದ ಚರ್ಚ್ ಆಫ್ ಸೌತ್ ಇಂಡಿಯಾದ ರುದ್ರಭೂಮಿಯಲ್ಲಿ ಅವರಿಗೆ ಗೋರಿಯನ್ನು ಕಟ್ಟಲಾಯಿತು. ಬಂಗಲೆ, ಪ್ರಕೃತಿಯಿಂದ ಸುತ್ತುವರಿದಿದ್ದು, ಮರಗಳಿಂದ ಕೂಡಿತ್ತು. ಅದರ ಹಿಂದೆ ಒಂದು ದೊಡ್ಡ ಕೆರೆ ಇತ್ತು. ಕಟ್ಟಡ ಮತ್ತು ಸುತ್ತಲಿದ್ದ ವನ, ೧೬೦ ಅಡಿ ಅಗಲ, ೬೦೦ ಅಡಿ ಉದ್ದವಿತ್ತು. ಹಿಂಭಾಗದಲ್ಲಿ ಇದ್ದ ಕೆರೆ ರಾಜರ ಮನೆಯವರ ಉಪಯೋಗಕ್ಕಾಗಿ ಇತ್ತು.

ಕರ್ನಲ್ ಮಾರ್ಟಿನ್ನರ ನಿಧನಾನಂತರ ರಾಜರು ಬಂಗಲೆಯಲ್ಲಿ ಜಗನ್ಮಾತೆ ರಾಜರಾಜೇಶ್ವರಿಯನ್ನು ಬಲಿ ಸಮೇತ ಪೂಜಿಸುತ್ತಿದ್ದರು. ೧೮೯೪ರಲ್ಲಿ ಶೃಂಗೇರಿ ಮಹಾಪೀಠಾಧೀಶ್ವರರಾದ ಶ್ರೀ ಶಿವಾಭಿನವ ನೃಸಿಂಹ ಭಾರತಿಯವರು ಈ ಸ್ಥಳಕ್ಕೆ ಭೇಟಿಯಿತ್ತರು. ರಾಜರು, ಬಲಿ ಕೊಡುವ ಅಭ್ಯಾಸವನ್ನು ತೊರೆದು ಸಾತ್ವಿಕ ಪೂಜಾ ವಿಧಿಯನ್ನು ಅನುಸರಿಸಬೇಕೆಂದು ಅವರು ತಮ್ಮ ಅಭಿಲಾಷೆಯನ್ನು ವ್ಯಕ್ತಪಡಿಸಿದರು. ಪೀಠಾಧಿಪತಿಗಳು ಬಂಗಲೆಯಲ್ಲಿ ೪೮ ದಿನ ಗಳಿದ್ದು, ರಾಜರಾಜೇಶ್ವರಿ ದೇವತೆಯ ಯಜ್ಞವನ್ನು ಮಾಡಿ ಬಂಗಲೆಯನ್ನು ಪವಿತ್ರಗೊಳಿಸಿದರು. ರಾಜರಾಜೇಶ್ವರಿ ದೇವಿಯ ಸ್ವರ್ಣ ವಿಗ್ರಹವನ್ನು ಬಂಗಲೆಯಿಂದ ಅರಮನೆಯ ದೇವಾಲಯಕ್ಕೆ ಸ್ಥಳಾಂತರಿಸಲಾಯಿತು. ಅಂದಿನಿಂದ ಬಂಗಲೆಯನ್ನು 'ಶಂಕರ ವಿಲಾಸಂ' ಎಂದು ಕರೆಯತೊಡಗಿದರು; ಕೆಲವು ವೇಳೆ 'ಶಂಕರ ವಿಲ್ಲ' ಅಥವಾ 'ಶಂಕರ ವಿಲಾಸ್' ಎಂದೂ ಕರೆಯುತ್ತಿದ್ದರು. ಈ ಶಂಕರ ವಿಲಾಸ್ ಕಟ್ಟಡದಲ್ಲಿಯೇ ಸ್ವಾಮಿ ವಿವೇಕಾನಂದರು ತಂಗಿದ್ದರು. ಈ ಬಂಗಲೆಗೆ ಚಾರಿತ್ರಿಕ ಪ್ರಾಮುಖ್ಯತೆ ಇದೆ. ಏಕೆಂದರೆ ರಾಮನಾಡಿನ ರಾಜರಾದ ಭಾಸ್ಕರ ಸೇತುಪತಿಯವರು ಸರ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಲು ತಾವೇ ಅಮೇರಿಕಾಗೆ ಹೋಗಲು ನಿರ್ಧರಿಸಿದ್ದರು. ಆದರೆ, ಸ್ವಾಮಿ ವಿವೇಕಾನಂದರನ್ನು ನೋಡಿ ಅವರೊಡನೆ ಮಾತನಾಡಿದ ಮೇಲೆ ಸಮ್ಮೇಳನದಲ್ಲಿ ಭಾಗವಹಿಸಲು ಸರಿಯಾದ ವ್ಯಕ್ತಿ ಸ್ವಾಮಿಜಿಯವರೇ ಎಂದು ಅವರು ನಿರ್ಧರಿಸಿದರು.

ಲೇಖಕರು ಈಗಿನ ರಾಜರನ್ನು ನೋಡಲು ಹೋದಾಗ ಅರಮನೆಯ ದೇವಸ್ಥಾನದಲ್ಲಿ ರಾಜರಾಜೇಶ್ವರಿ ದೇವಿಗೆ ಮಾಡಿದ ಮಧ್ಯಾಹ್ನದ ಆರತಿಯನ್ನು ನೋಡುವ ಸೌಭಾಗ್ಯ ಅವರಿಗೆ ದೊರೆಯಿತು.

ಭಾಸ್ಕರ ಸೇತುಪತಿಯವರ ತಂದೆ ಮುತ್ತೂರಮಾಲಿಂಗ ಸೇತುಪತಿಯವರ ಕಾಲದಿಂದ ಅಸಂಖ್ಯ ಕವಿಗಳು ಮತ್ತು ಪಂಡಿತರು 'ಶಂಕರ ವಿಲಾಸ'ದಲ್ಲಿ ತಂಗಿದ್ದರು. ಸೇತುಪತಿ ಮಹಾರಾಜರುಗಳಿಂದ ಆಶ್ರಯ ಪಡೆದ ಮತ್ತು ಸನ್ಮಾನಿಸಲ್ಪಟ್ಟ ಕೆಲವು ಮಹಾಕವಿಗಳು, ಸಾಹಿತಿಗಳು ಮತ್ತು ಕಲಾವಿದರೆಂದರೆ, ರಾಘವ ಅಯ್ಯಂಗಾರ್, ಪೂಚ್ಚಿ ಶ್ರೀನಿವಾಸ ಅಯ್ಯಂಗಾರ್, ಉ.ವೇ.ಸ್ವಾಮಿನಾಥ ಅಯ್ಯರ್, ಅರುಣಾಚಲ ಕವಿರಾಯರ್, ಅಬ್ದುಲ್ ಕದಿರ್ ರವುಥರ್, ಚಿನ್ನಸ್ವಾಮಿ ಪಿಳ್ಳೈ, ಸಕ್ಕರೈ ಪುಲವರ್, ಶತಾವಧಾನಂ ಶರವಣ ಪೆರುಮಾಳ್, ತಿರುಕೋಡಿಕಾವಲ್ ಕೃಷ್ಣಯ್ಯರ್, ಅಂಬಳವಾನ ದೇಶಿಕರ್, ಸಿತ್ರಾಂಬಾಲ ಕವಿರಾಯರ್, ಆರ್ಮುಗ ನಾವಲರ್, ಶಿವಶಂಭು ಪುಲವರ್, ಮೀರ್ ಜವ್ವಡು ಪುಲವರ್ ಮೊದಲಾದವರು.

## ರಾಜಾ ಭಾಸ್ಕರ ಸೇತುಪತಿ

ನವಂಬರ್ ೩, ೧೮೬೮ರಲ್ಲಿ ಜನಿಸಿದ ರಾಜ ಭಾಸ್ಕರ ಸೇತುಪತಿ, ಕೇವಲ ೩೫ ವರುಷಗಳು ಬದುಕಿದ್ದರು. ಅವರು ಆಗಿನ ರಾಣಿಯಾಗಿದ್ದ ಪರ್ವತವರ್ಧಿನಿ ನಾಚ್ಚಿಯಾರ್ ಅವರ ಮೊಮ್ಮಗ. ಅವರು ನಾಲ್ಕು ವರ್ಷದವರಾಗಿದ್ದಾಗ ಅವರ ತಂದೆ ಮುತ್ತೂರ



ರಾಜಾ ಭಾಸ್ಕರ ಸೇತುಪತಿ (೧೮೬೮-೧೯೦೩)

ಮಾಲಿಂಗ ಸೇತುಪತಿ (II) ಕಾಲವಾದ ಕಾರಣ, ಬ್ರಿಟಿಷ್ ಕಾನೂನಿನಂತೆ, 'ಕೋರ್ಟ್ ಆಫ್ ವಾರ್ಡ್ಸ್' ಪ್ರಕಾರ ರಚಿಸಿದ ಸಮಿತಿಯ ಮೇರೆಗೆ ಅವರನ್ನು ಬೆಳೆಸಲಾಯಿತು. ಅವರು ಯುವಕರಾಗುವವರೆಗೂ, ಅವರಿಗೆ ಬ್ರಿಟಿಷ್ ಜೀವನ ಶೈಲಿ, ನಡೆನುಡಿ, ಪಾಶ್ಚಾತ್ಯ ಸಂಗೀತ ಮತ್ತು ಇಂಗ್ಲಿಷ್ ಭಾಷೆಯಲ್ಲಿ ತರಬೇತಿ ನೀಡಲಾಯಿತು. ಅಧಿಕಾರ ವರ್ಗಾವಣೆಯ ಕಾಲದಲ್ಲಿ ರಾಮನಾಥಪುರಂ ರಾಜ್ಯ ಅಲ್ಲಿನ ಕಲೆಕ್ಟರ್ ಅಧೀನದಲ್ಲಿದ್ದಿತು. ೧೮೮೯ರ ಏಪ್ರಿಲ್ ೩ ರಂದು ಭಾಸ್ಕರ ಸೇತುಪತಿಯವರು ರಾಜರಾಗಿ ಅಧಿಕಾರ ವಹಿಸಿಕೊಂಡರು.

ಪಾಶ್ಚಿಮಾತ್ಯ ಪದ್ಧತಿಗಳಲ್ಲಿ ತರಬೇತಿ ಪಡೆದಿದ್ದರೂ, ರಾಜರ ಮನಸ್ಸು ಯಾವಾಗಲೂ ಭಾರತೀಯ ದೇವತೆಗಳಲ್ಲಿ ಮತ್ತು ಸಂಪ್ರದಾಯಗಳಲ್ಲಿ ನೆಲೆಸಿತ್ತು. ಅವರಿಗೆ ರಾಮೇಶ್ವರದ ರಾಮಲಿಂಗೇಶ್ವರ, ರಾಜರಾಜೇಶ್ವರಿ ದೇವಿ, ತಿರುಪ್ಪುಲ್ಲಾನಿ ವೆಂಕಟೇಶ್ವರ ಇತ್ಯಾದಿ ದೇವತೆಗಳಲ್ಲಿ ಅಪಾರ ಭಕ್ತಿ. ಅವರು ತಮಿಳು ಸಾಹಿತ್ಯದಲ್ಲಿಯೂ ಪರಿಣತಿ ಪಡೆದಿದ್ದರು.

ರಾಜರು ಔದಾರ್ಯಕ್ಕೆ ಹೆಸರಾಗಿದ್ದರು. ಅವರು ೪೦ ಲಕ್ಷ ರೂಪಾಯಿ ದಾನ ಮಾಡಿದ್ದರೆಂದು ಅಂದಾಜು ಮಾಡಲಾಗಿದೆ. ಆಗಿನ ಕಾಲಕ್ಕೆ ಅದು ಅಸಂಖ್ಯ ಮೊತ್ತವೆಂದೇ ಭಾವಿಸಬೇಕು. ಅವರು ಸಾಮಾನ್ಯರಲ್ಲಿ ಜನಪ್ರಿಯರಾಗಿದ್ದರು. ಹಿಂದೂ ದೇವಾಲಯಕ್ಕೆ ದಲಿತರ ಪ್ರವೇಶವನ್ನು ನಿರಾಕರಿಸಿದವರ ವಿರುದ್ಧ ಒಂದು ಮೆರವಣಿಗೆಯನ್ನು ೧೮೯೭ರಲ್ಲಿ ಏರ್ಪಡಿಸಿದ್ದರು.

ಆದರೆ ಅವರ ಶೀಲಕ್ಕೆ ಕಿರೀಟಪ್ರಾಯವಾಗಿದ್ದ ಗುಣವೆಂದರೆ ನಿರ್ಲಿಪ್ತತೆ. ೧೯೦೦ರಲ್ಲಿ ಶೃಂಗೇರಿಯ ಶಂಕರರು ಅರಮನೆಯಲ್ಲಿ ರಾಜರಾಜೇಶ್ವರಿಯ ಪೂಜೆ ಮಾಡಿದಾಗ ರಾಜರು, ಶಂಕರಾ ಚಾರ್ಯರ ಪಾದಗಳಿಗೆ ನಮಿಸಿ ತಮ್ಮ ಪೇಟ ಮತ್ತು ಕತ್ತಿಯನ್ನು ಅವರ ಪದತಲದಲ್ಲಿ ಅರ್ಪಿಸುವುದರ ಮೂಲಕ ಸಾಂಕೇತಿಕವಾಗಿ ಅವರ ರಾಜ್ಯವನ್ನು ಶೃಂಗೇರಿ ಮಠಕ್ಕೆ ಅರ್ಪಿಸಿದರಂತೆ. ಶಂಕರಾ ಚಾರ್ಯರು ಅದನ್ನು ಸ್ವೀಕರಿಸಿ ನಂತರ ರಾಜ್ಯವನ್ನು ರಾಜಕುಮಾರ ರಾಜರಾಜೇಶ್ವರನಿಗೆ ಕೊಟ್ಟರು. ಆ ಸಮಯದಲ್ಲಿ ರಾಜರಿಗೆ ೩೨ ವರ್ಷ ವಯಸ್ಸಾಗಿತ್ತು!

ಅವರ ಜೀವನದ ಅಂತ್ಯ ಅವರ ಜೀವಿತದಷ್ಟೇ ನಾಟಕೀಯ ವಾಗಿತ್ತು. ರಾಜರು ರಾಜ್ಯವನ್ನು ತಮ್ಮ ಮಗನಿಗೆ ಬಿಟ್ಟುಕೊಟ್ಟು ತಾಮ್ರಪರ್ಣಿ ನದಿಯ ದಡದಲ್ಲಿರುವ ತಿರುವಾವಡುತುರೈ ಅಧೀನಂ ಎಂಬ ಹಳೆಯ ಸಾಂಪ್ರದಾಯಿಕ ಮಠದಲ್ಲಿ ಸಾಧ ನಾದಿಗಳನ್ನು ಮಾಡುತ್ತ ತಮ್ಮ ಕೊನೆಗಾಲವನ್ನು ಕಳೆದರು. ತಮ್ಮ ಜೀವನದ ಅಂತ್ಯ ಕಾಲ ಸಮೀಪಿಸಿದಾಗ ಹರಿಕೇಶನಲ್ಲೂರ್ ಮುತ್ತಯ್ಯ ಭಾಗವತರ್ ಅವರನ್ನು ಮೋಹನ ರಾಗದಲ್ಲಿರುವ ಜಗನ್ಮಾತೆಯ ಕೀರ್ತನೆಯನ್ನು ಹಾಡುವಂತೆ ಕೇಳಿಕೊಂಡರು. ಆ ಸಂಗೀತಗಾರರಿಗೆ ವಜ್ರದ ಸರವನ್ನು ಕೊಡುತ್ತಾ ರಾಜರು ಜಗ ನ್ಮಾತೆಯ ಪಾದಾರವಿಂದವನ್ನು ಸೇರಿದರು.

### ಪರಿವ್ರಾಜಕ ಸ್ವಾಮಿ ವಿವೇಕಾನಂದ

ಸ್ವಾಮಿ ವಿವೇಕಾನಂದರು ಭಾರತೀಯರ ಸ್ಥಿತಿಗತಿಗಳನ್ನು ತಿಳಿಯುವ ಸಲುವಾಗಿ ದೇಶದ ಉದ್ದಗಲಕ್ಕೂ ಸಂಚರಿಸಿದ ನಂತರ ಕನ್ಯಾಕುಮಾರಿಯ ಬಂಡೆಯನ್ನು ಡಿಸೆಂಬರ್ ೨೪, ೧೮೯೨ ರಂದು ತಲುಪಿದರು. ಮೂರು ದಿನಗಳ ಕಾಲ ಅದರ ಮೇಲೆ ತಪಸ್ಸು ಮಾಡಿದ ನಂತರ ಸ್ವಾಮೀಜಿ ರಾಮೇಶ್ವರಕ್ಕೆ ಹೋದರು. ಕಾಲು ನಡಿಗೆಯಲ್ಲಿ ಹೋಗುತ್ತಾ ಮಾರ್ಗಮಧ್ಯೆ ಮಧುರೆಯಲ್ಲಿ ನಿಂತರು. ಅಲ್ಲಿ ರಾಮನಾಡಿನ ರಾಜರಾದ ಭಾಸ್ಕರ ಸೇತುಪತಿಯವರನ್ನು (೧೮೬೮-೧೯೦೩) ಪರಿಚಯ ಪತ್ರದೊಂದಿಗೆ ಭೇಟಿ ಮಾಡಿದರು. ಭಗವದ್ಭಕ್ತರೂ, ಭಾರತದ ಅಂದಿನ ರಾಜರ ಪೈಕಿ ಅತ್ಯಂತ ಪ್ರಾಜ್ಞರೂ ಆಗಿದ್ದ ಅವರು, ಸ್ವಾಮೀಜಿಯವರು ಮುಂದೆ ನಮ್ಮ ಮಾತೃಭೂಮಿ ಯಲ್ಲಿ ಪ್ರಸಿದ್ಧರಾಗುವರು ಎಂಬುದನ್ನು ಕೂಡಲೆ ಅರಿತರು; ನಂತರ, ಅವರ ಭಕ್ತರೂ ಶಿಷ್ಯರೂ ಆದರು. ರಾಜರು ಸ್ವಾಮಿ ವಿವೇಕಾನಂದರನ್ನು ರಾಮನಾಥಪುರದ ಅರಮನೆಯಲ್ಲಿ ತಮ್ಮ ಅತಿಥಿಯಾಗಿ ಇರುವಂತೆ ಆಹ್ವಾನಿಸಿದರು. ಸ್ವಾಮೀಜಿಯವರು 'ಶಂಕರ ವಿಲ್ಲ'ದಲ್ಲಿ ಒಂದು ವಾರ ತಂಗಿದ್ದು ರಾಮೇಶ್ವರ ದೇವಾ ಲಯಕ್ಕೆ ಭೇಟಿಯಿತ್ತರು. ಆದರೆ ಈ ಬಗ್ಗೆ ಅಧಿಕೃತ ದಾಖಲೆ ಇನ್ನೂ ದೊರೆತಿಲ್ಲ. ಅರಮನೆಯ ದಾಖಲೆಗಳ ಪರಿಶೀಲನೆ ಇದನ್ನು ಸ್ಪಷ್ಟ ಗೊಳಿಸಬಹುದು. ಸ್ವಾಮೀಜಿಯವರು ಬಡವರ ವಿದ್ಯಾಭ್ಯಾಸ, ಕೃಷಿ ಸುಧಾರಣೆ, ಮತ್ತು ಭಾರತದ ಸಮಸ್ಯೆಗಳು ಮತ್ತು ಅದರ ಅಂತರ್ಗತ ಶಕ್ತಿ ಮುಂತಾದ ವಿಷಯಗಳ ಬಗ್ಗೆ ತಮ್ಮ ಆಲೋ ಚನೆಯನ್ನು ರಾಜರಿಗೆ ವಿವರಿಸಿದರು. ಭಾರತದ ಆಧ್ಯಾತ್ಮಿಕ



ಆಲೋಚನೆಯತ್ತ ವಿಶ್ವದ ಗಮನವನ್ನು ಸೆಳೆಯುವುದಕ್ಕೆ ಮತ್ತು ಸ್ವಾಮೀಜಿಯವರು ಭಾರತದಲ್ಲಿ ಮುಂದೆ ಮಾಡಬೇಕಾಗಿರುವ ಕೆಲಸಕ್ಕೆ ಬುನಾದಿ ಹಾಕುವುದಕ್ಕೆ ಚಿಕಾಗೋದ ಸರ್ವಧರ್ಮ ಸಮ್ಮೇ ಳನವು ಒಂದು ಅನುಕೂಲಕರ ಅವಕಾಶವೆಂದು ಹೇಳುತ್ತ ಸ್ವಾಮೀಜಿ ಯವರನ್ನು ಚಿಕಾಗೋ ಸರ್ವಧರ್ಮ ಸಮ್ಮೇಳನಕ್ಕೆ ಹೋಗುವಂತೆ ರಾಜರು ಮತ್ತೆ ಮತ್ತೆ ಆಗ್ರಹಿಸಿದರು. ಸರ್ವಧರ್ಮ ಸಮ್ಮೇಳನ ವನ್ನು ಉದ್ದೇಶಿಸಿ ಮಾತನಾಡುವುದರ ಆವಶ್ಯಕತೆ ಎಷ್ಟು ಮುಖ್ಯ ವಾದುದು ಎಂಬುದನ್ನು ಸ್ವಾಮೀಜಿಯವರಿಗೆ ಮನದಟ್ಟು ಮಾಡಿ ಕೊಡುವ ಸಲುವಾಗಿ ರಾಜಾ ಭಾಸ್ಕರ ಸೇತುಪತಿಯವರು ಸ್ವಾಮೀಜಿ ಯವರನ್ನು ಮತ್ತೆ ಮದರಾಸಿನ ರಾಯಪೇಟದಲ್ಲಿರುವ ವುಡ್ ಲ್ಯಾಂಡ್ ಅರಮನೆಯಲ್ಲಿ ಜನವರಿ ೧೮೯೩ರಲ್ಲಿ ಭೇಟಿಯಾದ ರೆಂದು ರಾಮನಾಡಿನ ಈಗಿನ ರಾಜರಾದ ರಾಜಾ ಕುಮಾರನ್ ಸೇತುಪತಿಯವರು ನಮಗೆ ತಿಳಿಸಿದರು.

### ವಿಶ್ವವಿಜಯಿ ಸ್ವಾಮಿ ವಿವೇಕಾನಂದ

ಚಿಕಾಗೋ ಮತ್ತು ಇತರ ಪಾಶ್ಚಿಮಾತ್ಯ ದೇಶಗಳಲ್ಲಿ ಅಮೋಘ ಉಪನ್ಯಾಸಗಳನ್ನು ನೀಡಿದ ನಂತರ ಸ್ವಾಮೀಜಿ ಜನವರಿ ೨೬, ೧೮೯೭ರಂದು ಭಾರತಕ್ಕೆ ಹಿಂತಿರುಗಿದರು. ಅವರು ಇಳಿದುದು ಪಾಂಬನ್‌ನಲ್ಲಿ, ಈಗ ಆ ಸ್ಥಳವನ್ನು ಕುಂತುಕಲ್ ಎಂದು ಕರೆಯು

ತ್ತಾರೆ. ಅದರ ಅರ್ಥ 'ಪದಾರ್ಪಣೆ' ಎಂದು. ಈ ಸ್ಥಳವನ್ನು ಆ ಹೆಸರಿನಿಂದ ಕರೆಯುವುದಕ್ಕೆ ಕಾರಣ, ಸ್ವಾಮೀಜಿಯವರು ಪಾಶ್ಚಿಮಾತ್ಯ ದೇಶಗಳಿಂದ ಹಿಂತಿರುಗಿದ ನಂತರ ಅವರು ಭಾರತದಲ್ಲಿ ಪದಾರ್ಪಣೆ ಮಾಡಿದ ಸ್ಥಳ ಇದು. ಅವರ ರಾಜ್ಯಕ್ಕೆ ಸೇರಿದ ಈ ಸ್ಥಳದಲ್ಲಿ ಭಾಸ್ಕರ ಸೇತುಪತಿ ಸ್ವಾಮೀಜಿಯವರಿಗೆ ರೋಮಾಂಚಕ ಸ್ವಾಗತವನ್ನು ನೀಡಿದರು. ಸ್ವಾಮೀಜಿಯವರ ಜೀವನಚರಿತ್ರೆಯಿಂದ ಉದಾಹರಿಸುವುದಾದರೆ: ''ಮಂಗಳವಾರ, ಜನವರಿ ೨೬, ಮಧ್ಯಾಹ್ನ ಸುಮಾರು ೩ ಗಂಟೆಯ ಸಮಯ, ಸ್ವಾಮೀಜಿ ಮತ್ತು ಅವರ ಐರೋಪ್ಯ ಶಿಷ್ಯರನ್ನು ಹೊತ್ತ ಹಡಗು ಪಾಂಬನ್ ತಲಪಿತು. ಸ್ವಾಮೀಜಿ ರಾಮನಾಡಿನ ರಾಜರಿಂದ ರಾಮೇಶ್ವರಕ್ಕೆ ಸ್ವಾಗತಿಸಲ್ಪಟ್ಟಿದ್ದರು. ಸ್ವಾಮೀಜಿಯವರು ಹಡಗಿನಿಂದ ಇಳಿದು ಅಲ್ಲಿಗೆ ಹೋಗಬೇಕೆಂದಿರುವಷ್ಟರಲ್ಲಿ ರಾಜರೇ ಅವರನ್ನು ಭೇಟಿ ಮಾಡಲು ಬರುತ್ತಿದ್ದಾರೆ ಎಂದು ತಿಳಿಯಿತು. ರಾಜರು ಬಂದ ನಂತರ ಸ್ವಾಮೀಜಿ ಮತ್ತು ಅವರೊಡನೆ ಇದ್ದವರನ್ನು ರಾಜರ ದೋಣಿಗೆ ಕರೆದೊಯ್ಯಲಾಯಿತು. ಸ್ವಾಮೀಜಿ ದೋಣಿಗೆ ಕಾಲಿಟ್ಟ ಕೂಡಲೆ ರಾಜರು ಮತ್ತು ಅವರ ಸಿಬ್ಬಂದಿ ಸ್ವಾಮೀಜಿಯವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ರಾಜ ಮತ್ತು ಸಂನ್ಯಾಸಿಯ ಈ ಸಮಾಗಮ ಹೃದಯಸ್ಪರ್ಶಿಯಾಗಿತ್ತು. ತಾವು ಪಶ್ಚಿಮ ದೇಶಗಳಿಗೆ ಹೋಗಬೇಕೆಂಬ ಆಲೋಚನೆಯನ್ನು ಮಾಡಿ, ಅವರನ್ನು ಪ್ರೋತ್ಸಾಹಿಸಿ ಮತ್ತು ಅದಕ್ಕೆ ಸಹಾಯವನ್ನು ಮಾಡಿದವರು ಈ ರಾಜರಾದ ಕಾರಣ, ಭಾರತ ಭೂಮಿಗೆ ಹಿಂದಿರುಗುವಾಗ ಮೊದಲು ಅವರನ್ನು ಭೇಟಿ ಮಾಡುವುದು ಉಚಿತವಾದುದೆಂದು ಸ್ವಾಮೀಜಿಯವರು ಭಾವುಕರಾಗಿ ಹೇಳಿದರು.'' ರಾಜರು ಸ್ವಾಮೀಜಿಯವರನ್ನು ರಾಜ-ದೋಣಿಯಲ್ಲಿ ಸಿಂಹಾಸನದಂತಹ ಕುರ್ಚಿಯಲ್ಲಿ ಕುಳ್ಳಿರಿಸಿ, ಸ್ವಾಮೀಜಿಯವರ ಪಾದಗಳಿಗೆ ಪಾದರಕ್ಷೆ ತೊಡಿಸಿ, ತಮ್ಮ ತಲೆಯ ಮೇಲೆ ಅನರ್ಘ್ಯ ಕಿರೀಟವನ್ನು ಧರಿಸಿರುವುದಕ್ಕಿಂತ ಈ ಕೆಲಸವನ್ನು ಮಾಡುವ ಸ್ಥಿತಿಯಲ್ಲಿ ಇರುವುದು ಅತ್ಯಂತ ಗೌರವಯುತ ಪುಣ್ಯಕಾರ್ಯ ಎಂದು ಭಾವಿಸಿರುವುದಾಗಿ ಹೇಳಿದರು.

ರಾಜ-ದೋಣಿ ದಡವನ್ನು ಮುಟ್ಟುತ್ತಲೇ ಪಾಂಬನ್ನಿನ ಜನರು ಎದ್ದುನಿಂತು ಸ್ವಾಮೀಜಿಯವರಿಗೆ ಅದ್ಭುತ ಸ್ವಾಗತ ಕೋರಿದರು. ಅಲಂಕೃತ ಮಂಟಪದಲ್ಲಿ ಸ್ವಾಮೀಜಿಯವರಿಗೆ ಸ್ವಾಗತ ಬಿನ್ನವತ್ತಳೆಯನ್ನು ಓದಲಾಯಿತು. ಇದಕ್ಕೆ ರಾಜರು ಮನದಾಳದ ಭಾವನೆಯಿಂದ ಕೂಡಿದ ಸಣ್ಣ ವೈಯಕ್ತಿಕ ಸ್ವಾಗತವನ್ನು ಸೇರಿಸಿದರು. ಸ್ವಾಮೀಜಿಯವರು ಹ್ರಸ್ವವಾಗಿ ಉತ್ತರವಿತ್ತರು. ''ಭಾರತೀಯರ ಜೀವನದ ಬೆನ್ನೆಲುಬು, ರಾಜಕೀಯವಲ್ಲ, ಸೈನ್ಯಶಕ್ತಿಯಲ್ಲ, ವಾಣಿಜ್ಯ ಶ್ರೇಷ್ಠತೆಯಲ್ಲ, ಯಂತ್ರಯುಕ್ತಿಯಲ್ಲ, ಧರ್ಮ ಮತ್ತು ಧರ್ಮ ಮಾತ್ರ; ಭರತಖಂಡ ಮಾತ್ರವೇ ಪ್ರಪಂಚಕ್ಕೆ ಆಧ್ಯಾತ್ಮಿಕತೆಯನ್ನು ಕೊಡಬಲ್ಲುದು'' ಎಂದು ತಿಳಿಸಿದರು. ತಮಗೆ ದಯಮಾಡಿ ನೀಡಿದ ಸ್ವಾಗತಕ್ಕಾಗಿ ಪಾಂಬನ್ನಿನ ಜನರಿಗೆ ಧನ್ಯವಾದಗಳನ್ನು ಹೇಳಿ, ರಾಮನಾಡಿನ ರಾಜರು ಮಾಡಿದ ಎಲ್ಲ ಸಹಾಯಕ್ಕೆ ಅವರಿಗೆ ಕೃತಜ್ಞತೆ ಅರ್ಪಿಸಿದರು. ಸ್ವಾಮೀಜಿಯವರೊಡನೆ ಅವರ ಗುರುಭಾಯಿಗಳಾದ ಸ್ವಾಮಿ ನಿರಂಜನಾನಂದರು, ಮಿಸ್ಟರ್ ಮತ್ತು ಮಿಸೆಸ್ ಸೇವಿಯರ್, ಜೆ.ಜೆ. ಗುಡ್‌ವಿನ್ ಹಾಗೂ ಸಿಲೋನಿನ ಮಿಸ್ಟರ್ ಹ್ಯಾರಿಸನ್ ಇದ್ದರು.

ಸ್ವಾಮೀಜಿಯವರು ಪಶ್ಚಿಮ ದೇಶಗಳಿಂದ ಹಿಂತಿರುಗಿದ ನಂತರ ಭಾರತದ ನೆಲದಲ್ಲಿ ಹೆಜ್ಜೆ ಇಟ್ಟ ಸ್ಥಳದ ನೆನಪಿಗಾಗಿ ರಾಜರು ೪೦ ಅಡಿ ಎತ್ತರದ ಸ್ಮಾರಕವೊಂದನ್ನು ನಿರ್ಮಿಸಿದರು. ಅದರ ಮೇಲೆ ಹೀಗೆ ಕೆತ್ತಲಾಗಿತ್ತು:

**''ಸತ್ಯಮೇವ ಜಯತೇ''**

ರಾಮನಾಡಿನ ರಾಜರಾದ ಭಾಸ್ಕರ ಸೇತುಪತಿಯವರಿಂದ ಸ್ಥಾಪಿಸಲಾದ ಈ ಸ್ಮಾರಕವು, ಪರಮಪೂಜ್ಯ ಸ್ವಾಮಿ ವಿವೇಕಾನಂದರು ಪಶ್ಚಿಮಾರ್ಧ ಗೋಳದಲ್ಲಿ ವೇದಾಂತ ಧರ್ಮವನ್ನು ಹರಡುವ ಶ್ರಮಪೂರಿತ ಸೇವೆಯಲ್ಲಿ ಅದ್ಭುತ ಅಭೂತಪೂರ್ವ ಯಶಸ್ಸನ್ನು ಪಡೆದು, ಅವರ ಆಂಗ್ಲ ಶಿಷ್ಯರೊಂದಿಗೆ ತಮ್ಮ ಪವಿತ್ರ ಪಾದಗಳನ್ನು ಮೊಟ್ಟ ಮೊದಲ ಬಾರಿ ಭಾರತದ ನೆಲದಲ್ಲಿ ಇಟ್ಟ ಆ ಪವಿತ್ರ ಸ್ಥಳವೆಂದು ಗುರುತಿಸಲಾಗುತ್ತಿದೆ. **ಜನವರಿ ೨೭, ೧೮೯೭**

ಈ ಸ್ಮಾರಕ ಈಗ ಇಲ್ಲ. ಹಿಂದೆ ಮೈಲಾಪುರದ 'ರಾಮಕೃಷ್ಣ ಸ್ಟೂಡೆಂಟ್ಸ್ ಹೋಂ' ನ್ ಮುಖ್ಯ ವಾರಸುದಾರರಾಗಿದ್ದ, ರಾಮಕೃಷ್ಣ ಸಂಘದ ಹಿರಿಯ ಸಂನ್ಯಾಸಿಗಳಾದ ಸ್ವಾಮಿ ತಥಾಗತಾನಂದರನ್ನು ಕೇಳಿದಾಗ ಅವರು, ''ಬಹಳ ಕಾಲ ಎಲ್ಲಿಯೂ ಆ ಸ್ಮಾರಕದ ಸುಳಿವು ಕಾಣಲಿಲ್ಲ. ೧೯೫೦ರಲ್ಲಿ ನಮ್ಮ ಮಿಷನ್ನಿನವರು ರಾಮೇಶ್ವರ ದೇವಾ ಲಯದ ಹತ್ತಿರ ಪರಿಹಾರಕಾರ್ಯ ಮಾಡುತ್ತಿದ್ದಾಗ ನಮ್ಮ ಸಂನ್ಯಾಸಿ ಗಳು ಅದನ್ನು ಪತ್ತೆ ಹಚ್ಚಲು ಬಹಳ ಪ್ರಯತ್ನಿಸಿದರು. ಅದರ ವಿಷಯವಾಗಿ ಅವರಿಗೆ ಯಾರಿಗೂ ಏನೂ ತಿಳಿದಿರಲಿಲ್ಲ'' ಎಂದು ಹೇಳಿದರು. ಸ್ಥಳೀಯ ಬೆಸ್ತರು ಆ ಸ್ತೂಪವನ್ನು ಒಡೆದು ಹಾಕಿರಬಹುದೆಂದು ನಂಬಲಾಗಿದೆ. ಇತ್ತೀಚೆಗೆ, ಆ ಸ್ಥಳದಲ್ಲಿ ತಮಿಳುನಾಡು ಸರ್ಕಾರದವರು ಒಂದು ಬೃಹತ್ತಾದ ವಿಸ್ತಾರವಾದ ಸ್ತಂಭವನ್ನು ಕಟ್ಟಿದ್ದಾರೆ. ಅದನ್ನು ತಿರುಪ್ಪರೈತ್ತುರೈನ 'ರಾಮಕೃಷ್ಣ ತಪೋವನಂ' ನವರು ಸಂರಕ್ಷಿಸಿಕೊಂಡು ಬಂದಿದ್ದಾರೆ. ನೂರಾರು ಮಂದಿ ಪ್ರವಾಸಿಗರು ಈ ಪವಿತ್ರ ಸ್ಥಳವನ್ನು ನೋಡಲು ಬರುತ್ತಿದ್ದಾರೆ.

ಪಾಂಬನ್ ಸಾರ್ವಜನಿಕ ಸಭೆಯ ನಂತರ ಸ್ವಾಮೀಜಿ ರಾಜರ ಗಾಡಿಯಲ್ಲಿ ಹೊರಟರು. ಸ್ವಲ್ಪ ಸಮಯದ ನಂತರ ಕುದುರೆಗಳನ್ನು ಕಳಚುವಂತೆ ರಾಜರು ಆಜ್ಞಾಪಿಸಿ ತಾವೇ ಗಾಡಿಯನ್ನು ಪಟ್ಟಣದ ವರೆಗೆ ಎಳೆದುಕೊಂಡು ಹೋದರು. ಸ್ವಾಮೀಜಿ ಪಾಂಬನ್‌ನಲ್ಲಿ ಮೂರು ದಿನಗಳು ಇದ್ದರು. ಜನವರಿ ೨೭ರಂದು ರಾಮೇಶ್ವರ ದೇವಸ್ಥಾನಕ್ಕೆ ಹೋದರು. ಐದು ವರ್ಷಗಳ ಹಿಂದೆ ತಾವು ಪರಿವ್ರಾಜಕರಾಗಿ ಅಲ್ಲಿಗೆ ಬಂದಿದ್ದುದನ್ನು ನೆನಪಿಸಿಕೊಂಡರು. ರಾಮೇಶ್ವರ ದೇವಾಲಯದಲ್ಲಿ ದೇವಸ್ಥಾನದ ಖಿಲ್ಲತ್ತು, ಆನೆ ಕುದುರೆಗಳ ಮೆರವಣಿಗೆ ಮತ್ತು ಸಾಂಪ್ರದಾಯಿಕ ಸಂಗೀತಗಳೊಂದಿಗೆ ಸ್ವಾಮೀಜಿಯವರನ್ನು ಬರಮಾಡಿಕೊಳ್ಳಲಾಯಿತು. ಸ್ವಾಮೀಜಿ ಇಲ್ಲಿ 'ನಿಜವಾದ ಪೂಜೆ' ಎಂಬ ವಿಷಯವಾಗಿ ಮಾತನಾಡಿದರು. ಅವರ ಮಾತುಗಳನ್ನು ಗರ್ಭಗುಡಿಯ ದ್ವಾರದಲ್ಲಿ ತಮಿಳು ಮತ್ತು ಇಂಗ್ಲಿಷ್‌ನಲ್ಲಿ ಕೆತ್ತಲಾಗಿದೆ. ಎಸ್ ನಾಗಲಿಂಗಂ ಪಿಳ್ಳೈಯವರು



ರಾಮೇಶ್ವರ ದೇವಾಲಯ

ಸ್ವಾಮೀಜಿಯವರ ಭಾಷಣವನ್ನು ತಮಿಳಿಗೆ ಅನುವಾದಿಸಿದರು. ಈ ಶುಭ ಸಂದರ್ಭದಲ್ಲಿ ರಾಜರು ಸಾವಿರಾರು ಬಡ ಜನರಿಗೆ ಆಹಾರ ಮತ್ತು ಬಟ್ಟೆಯನ್ನು ಕೊಟ್ಟರು.

### 'ಶಂಕರ ವಿಲಾಸ'ದತ್ತ

ಸ್ವಾಮೀಜಿಯವರು ಜನವರಿ ೨೯, ೧೮೯೭ ರಂದು ಪಾಂಬನ್‌ನಿಂದ ರಾಮನಾಥಪುರಕ್ಕೆ ತಿರುಪ್ಪುಲ್ಲಂ ಮಾರ್ಗವಾಗಿ ರಾಜ ದೋಣಿಯಲ್ಲಿ ಸಂಜೆ ಸುಮಾರು ೬ ಗಂಟೆಗೆ ಹೊರಟರು. ಸ್ವಾಮೀಜಿಯವರ ಜೀವನಚರಿತ್ರೆಯಿಂದ ಮತ್ತೆ ಉದಾಹರಿಸುವುದಾದರೆ: ''ಗುಂಡಿನ ಶಬ್ದವು ನೆರೆದಿದ್ದ ಸಾವಿರಾರು ಜನರಿಗೆ ಸ್ವಾಮೀಜಿಯವರ ಆಗಮನವನ್ನು ಸಾರಿತು. ದೋಣಿ ದಡ ಮುಟ್ಟಿದಾಗ ಮತ್ತು ಉತ್ಸವದ ಸಮಯದಲ್ಲಿ ಬಾಣಬಿರುಸುಗಳು ಮುಗಿಲಿಗೇರಿದುವು. ಎಲ್ಲೆಲ್ಲೂ ಆನಂದೋತ್ಸಾಹ. ಸ್ವಾಮೀಜಿಯವರನ್ನು ರಾಜರ ಸಾರೋಟಿನಲ್ಲಿ ಅಂಗರಕ್ಷಕ ಪಡೆಯೊಂದಿಗೆ ಕರೆತರಲಾಗುತ್ತಿತ್ತು. ಪಡೆಯನ್ನು ರಾಜರ ಸಹೋದರರೇ ಮುನ್ನಡೆಸುತ್ತಿದ್ದರು. ರಾಜರೇ ಕಾಲುನಡಿಗೆಯಲ್ಲಿ ಉತ್ಸವಕ್ಕೆ ದಾರಿ ತೋರುತ್ತಿದ್ದರು. ದಾರಿಯ ಇಕ್ಕೆಲಗಳಲ್ಲಿ ಪಂಜುಗಳು ಉರಿಯುತ್ತಿದ್ದುವು. ಭಾರತೀಯ ಮತ್ತು ಐರೋಪ್ಯ ಸಂಗೀತ, ಆನಂದಭರಿತವಾಗಿದ್ದ ಉತ್ಸವವನ್ನು ಮತ್ತೂ ಚೇತನಗೊಳಿಸಿದುವು. ಸ್ವಾಮೀಜಿ ದೋಣಿಯಿಂದ ಇಳಿದಾಗ, 'ನೋಡಿ, ವಿಜಯಿ ವೀರ ಬರುತಿಹನು...' ಎಂಬ ಹಾಡನ್ನು ವಾದ್ಯಗಳು ನುಡಿಸಿದುವು. ಎಲ್ಲ ವಿಜೃಂಭಣೆಯೊಂದಿಗೆ ಸ್ವಾಮೀಜಿ 'ಶಂಕರ ವಿಲ್ಲ' ತಲಪಿದರು.''

'' '**ಹರಹರಮಹಾದೇವ**' ಎಂಬ ಉದ್ಗಾರ ತಲ್ಲಣಗೊಳಿಸುತ್ತಿತ್ತು. ಇದು, ಸ್ವಾಮೀಜಿಯವರ ಬಗ್ಗೆ ನನಗೆ ಹೆಮ್ಮೆಯುಂಟುಮಾಡುತ್ತಿತ್ತು ಮತ್ತು ಭಾರತದಲ್ಲಿ ಸ್ವಾಮೀಜಿ ಸ್ಥಾನವೇನು ಎಂಬುದು ನನಗೆ ಮನವರಿಕೆಯಾಯಿತು'' ಎಂದು ಜೆ.ಜೆ. ಗುಡ್‌ವಿನ್ ಹೇಳಿದ್ದಾರೆ.



ಶಂಕರ ವಿಲಾಸ

ಸ್ವಾಮೀಜಿ 'ಶಂಕರ ವಿಲಾಸ'ವನ್ನು ಪ್ರವೇಶಿಸಿದರು. ಅಲ್ಲಿ ಅನೇಕರು ತಮ್ಮ ಸ್ವಾಗತಕ್ಕೆ ಸ್ವಾಮೀಜಿಯವರ ಉತ್ತರವನ್ನು ಕೇಳಲು ನೆರೆದಿದ್ದರು. ಜೈಕಾರ ಮತ್ತು ಹರ್ಷೋದ್ಗಾರದೊಂದಿಗೆ ಸ್ವಾಮೀಜಿಯವರನ್ನು ಸ್ವಾಗತಿಸಿದರು. ರಾಜರು ಸ್ವಾಮೀಜಿಯವರನ್ನು ಬಹುವಾಗಿ ಪ್ರಶಂಸಿಸುತ್ತಾ ಸಭೆಯನ್ನು ಉದ್ಘಾಟಿಸಿದರು. ರಾಜರ ಸೋದರ, ರಾಜಾ ದಿನಕರ ಸೇತುಪತಿ ಸ್ವಾಗತ ಬಿನ್ನವತ್ತಳೆಯನ್ನು ಓದಿದರು. ಉತ್ತರವಾಗಿ ಸ್ವಾಮೀಜಿ, 'ಸುದೀರ್ಘ ರಾತ್ರಿ ಕಡೆಗಿಂದು ಕೊನೆಗಾಣುತ್ತಿದೆ...' ಎಂದು ತಮ್ಮ ಭಾಷಣವನ್ನು ಪ್ರಾರಂಭಿಸಿದರು. ಅಂದಿನಿಂದ ಈ ಮಾತುಗಳು ಚಿರಂತನವಾಗಿ ಉಳಿದಿವೆ.

ರಾಜರು ಸ್ವಾಮೀಜಿಯವರನ್ನು ರಾಮನಾಡಿನ ಗಣ್ಯರಿಗೆ ಪರಿಚಯ ಮಾಡಿಸಿದರು. ಸ್ವಾಮೀಜಿ ಜನವರಿ ೩೧ರ ವರೆಗೆ, ಮೂರು ದಿನ 'ಶಂಕರ ವಿಲಾಸ'ದಲ್ಲಿದ್ದರು.

ರಾಮನಾಡಿನಲ್ಲಿ ಸ್ವಾಮೀಜಿ ಕ್ರಿಶ್ಚಿಯನ್ ಮಿಷನರಿ ಶಾಲೆಯೊಂದರಲ್ಲಿ ಮಾತನಾಡಿದರು. ಅವರ ಗೌರವಾರ್ಥವಾಗಿ ರಾಮಲಿಂಗ ವಿಲಾಸಂ ಅರಮನೆಯಲ್ಲಿ ಏರ್ಪಡಿಸಿದ ದರ್ಬಾರಿನಲ್ಲಿ ಅವರು ಭಾಗವಹಿಸಿದರು. ಈ ಸಭೆಯಲ್ಲಿ ಸ್ವಾಮೀಜಿ ತಮಿಳು ಮತ್ತು ಸಂಸ್ಕೃತದಲ್ಲಿ ಒಂದು ಬಿನ್ನವತ್ತಳೆಯನ್ನು ಸ್ವೀಕರಿಸಿ ಅದಕ್ಕೆ ಸಮರ್ಪಕವಾಗಿ ಉತ್ತರಿಸಿದರು. ಸಭೆಯಲ್ಲಿ ಸ್ವಾಮೀಜಿ ರಾಜರಿಗೆ 'ರಾಜರ್ಷಿ' ಎಂಬ ಬಿರುದನ್ನು ಕೊಟ್ಟರು, ಏಕೆಂದರೆ ಅವರು ರಾಜರೂ ಋಷಿಯೂ ಆಗಿದ್ದರು. ನಮಗೆ ತಿಳಿದಂತೆ ಸ್ವಾಮೀಜಿ ರಾಮನಾಡಿನ ರಾಜರಿಗಲ್ಲದೆ ಪ್ರಪಂಚದಲ್ಲಿ ಮತ್ತಾರಿಗೂ ಎಲ್ಲಿಯೂ ಯಾವ ಬಿರುದನ್ನೂ ಕೊಟ್ಟಿಲ್ಲ. ಇದು ರಾಮನಾಡಿನ ರಾಜರ ವೈಶಿಷ್ಟ್ಯವನ್ನು ಸಾರಿ ಹೇಳುತ್ತದೆ.

### ಮದರಾಸಿನ ಮಾರ್ಗದಲ್ಲಿ

ಜನವರಿ ೩೧ರಂದು ಸ್ವಾಮೀಜಿ ರಾಮನಾಡಿನ ಅರಮನೆಯಿಂದ ಹೊರಟು ಪರಮಕುಡಿ, ಮಾನಮದುರೈ, ಮದುರೈ, ತಿರುಚ್ಚಿ, ತಂಜಾವೂರು, ಕುಂಭಕೋಣಂ, ಮಾಯಾವರಂ ಮಾರ್ಗವಾಗಿ ಮದರಾಸಿಗೆ ಪ್ರಯಾಣ ಬೆಳೆಸಿದರು. ಇಲ್ಲಿ ಹಲವೆಡೆ ಅವರು ಸ್ಫೂರ್ತಿಯುತ ಭಾಷಣಗಳನ್ನು ಮಾಡಿ ಭಾರತೀಯರನ್ನು ತಮೋನಿದ್ರೆಯಿಂದ ಬಡಿದೆಬ್ಬಿಸಿದರು. ಈ ಭಾಷಣಗಳನ್ನು 'ಕೊಲಂಬೊದಿಂದ ಅಲ್ಮೋರಕೆ' ಎಂಬ ಪುಸ್ತಕದ ರೂಪದಲ್ಲಿ ಹೊರತರಲಾಗಿದೆ. ಇವು ಭಾರತದ ಪುನರುತ್ಥಾನಕ್ಕೆ ಸ್ವಾಮೀಜಿಯವರ ವಿಸ್ತೃತ ಸಮರನೀತಿಯನ್ನು ತಿಳಿಸುತ್ತವೆ. ಅವರು ಕುಂಭಕೋಣಂನಲ್ಲಿ ಮಾಡಿದ ಭಾಷಣದಲ್ಲಿ 'ಏಳಿ, ಎದ್ದೇಳಿ, ಗುರಿ ಮುಟ್ಟುವವರೆಗೂ ನಿಲ್ಲದಿರಿ' ಎಂದು ಭಾರತೀಯರನ್ನು ಆಗ್ರಹಿಸಿದ್ದದನ್ನು ವಿಶೇಷವಾಗಿ ಗಮನಿಸಬೇಕು. ಕುಂಭಕೋಣಂನಲ್ಲಿ ಅವರು ಆಡಿದ ಈ ನುಡಿಗಳು ಅನೇಕ ಮಂದಿ ಯುವಕರನ್ನು ಪ್ರೇರೇಪಿಸಿವೆ; ತಮ್ಮ ಜೀವನವನ್ನು ದೇಶದ ಉದ್ಧಾರಕ್ಕೆ ಸಮರ್ಪಿಸಲು ಸಿದ್ಧಗೊಳಿಸಿವೆ.

ರಾಮನಾಡಿನಿಂದ ಮದರಾಸಿಗೆ ಸುಮಾರು ೩೮೦ ಮೈಲಿ ರೈಲಿನಲ್ಲಿ ಮಾಡಿದ ಪ್ರಯಾಣ ಕಾರಣ ಸ್ವಾಮೀಜಿಯವರಿಗೆ ಬಹಳ ಆಯಾಸವಾಗಿತ್ತು. ಮೊದಲನೆಯದಾಗಿ, ಮಾರ್ಗ ಮಧ್ಯೆ ಅವರು ಅನೇಕ ಸ್ಥಳಗಳಲ್ಲಿ ಇಳಿದು ಅನೇಕ ಸಮಾರಂಭಗಳಲ್ಲಿ ಭಾಗವಹಿಸ ಬೇಕಾಯಿತು. ಪ್ರಯಾಣವನ್ನು ರಾತ್ರಿ ಮಾಡಬೇಕಾದುದರಿಂದ ನಿದ್ರೆ ಇಲ್ಲದಂತಾಯಿತು. ಕೆಲವು ವೇಳೆ ರೈಲಿನಲ್ಲಿ, ಕೆಲವು ವೇಳೆ ಗಾಡಿಯಲ್ಲಿ ಪ್ರಯಾಣಿಸುತ್ತಿದ್ದರು. ಪ್ರತಿ ರೈಲುನಿಲ್ದಾಣದಲ್ಲಿಯೂ ಸಾವಿರಾರು ಜನರು ಸೇರಿರುತ್ತಿದ್ದರು. ಕೊಲಂಬೋದಲ್ಲಿ ಮೊದಲ ಹೆಜ್ಜೆಯಿಟ್ಟ ಸಮಯದಿಂದ ಸ್ವಾಮೀಜಿಯವರಿಗಾದ ಪ್ರಯಾಸ ವನ್ನು ಕುರಿತು ರೊಮೆ ರೋಲಾ ಹೀಗೆ ಹೇಳಿದ್ದಾರೆ: ''ಆಯಾಸ, ಅನಾರೋಗ್ಯದಿಂದ ಬಳಲಿ ವಿಶ್ರಾಂತಿ, ಆರೈಕೆಯ ಆವಶ್ಯಕತೆ ಇರುವ ವ್ಯಕ್ತಿ ಅವರ ಶಕ್ತಿಯನ್ನು ಅಮಾನುಷವಾಗಿ ಬಳಸಿದಂತಿತ್ತು.'' ಅಷ್ಟೊಂದು ಶಕ್ತಿ ಅವರಿಗೆ ಹೇಗೆ ಬಂತೆಂದು ಆಶ್ಚರ್ಯವಾಗುವುದು. ಡಾ. ರಾಧಾಕೃಷ್ಣನ್ ಅವರ ಭಗವದ್ಗೀತೆಯ ಭಾಷ್ಯದಲ್ಲಿ ಬರೆದ ಒಂದು ವಿವರಣೆ ಹೀಗಿದೆ: ''ಅವನು ದೇವರಂತೆ ಕೆಲಸ ಮಾಡುವನು. ಅವನಲ್ಲಿ ಅನಿವಾರ್ಯತೆಯ ಬಂಧನವಿಲ್ಲ, ಅಜ್ಞಾನವಿಲ್ಲ. ಕೆಲಸ ಮಾಡುತ್ತಿದ್ದರೂ ಅವನು ನಿರ್ಲಿಪ್ತನಾಗಿರುವನು. ಅಹಂಕಾರಶೂನ್ಯ ನಾದಾಗ ಕರ್ಮವು ಅವನ ಅಂತರಾಳದಿಂದ ಹೊಮ್ಮುವುದು ಮತ್ತು ಹೃದಯದಲ್ಲಿ ಗುಹ್ಯನಾಗಿರುವ ಪರಮಾತ್ಮನಿಂದ ನಿಯಂತ್ರಿಸಲ್ಪಡು ವುದು. ಆಸೆ ಮತ್ತು ಬಂಧನದಿಂದ ಮುಕ್ತನಾಗಿ, ಎಲ್ಲ ಜೀವಿಗಳಲ್ಲಿ ಒಂದಾಗಿ, ಅಂತರಾಳದಿಂದ, ನಿತ್ಯ ದಿವ್ಯ ಪರಮಾತ್ಮನಿಂದ ನಿಯಂತ್ರಿತ ನಾಗಿ ಅವನು ಕೆಲಸ ಮಾಡುವನು.''

### ರಾಮನಾಡು ಕೇಂದ್ರದ ಪ್ರಸ್ತುತ ಪರಿಸ್ಥಿತಿ

ಭಾಸ್ಕರ ಸೇತುಪತಿಯವರ ಮೊಮ್ಮಗನ ಮಗನಾದ ರಾಮ ನಾಥ ಸೇತುಪತಿ ೧೯೭೮ರಲ್ಲಿ ಕಾಲವಾದಾಗ ರಾಜರ ಮನೆಯವರು 'ಶಂಕರ ವಿಲಾಸ' ಕಟ್ಟಡವನ್ನು ಸ್ವಾಮಿ ವಿವೇಕಾನಂದರಿಗೆ ಸಂಬಂಧ ಪಟ್ಟ ಯಾವುದಾದರೂ ಸಂಸ್ಥೆಗೆ ಮಾರಲು ಇಚ್ಛೆಪಟ್ಟರು. ಅನೇಕ ಹಿಂದೂ ಸಂಸ್ಥೆಗಳು ಆ ಸ್ಮಾರಕವನ್ನು ಪಡೆಯಲು ಯತ್ನಿಸಿದವು. ಆದರೆ ಕಾರಣಾಂತರದಿಂದ ಅದು ಸಾಧ್ಯವಾಗಲಿಲ್ಲ. ಕಡೆಗೆ, ಶ್ರೀ ಎಂ.ಎಸ್. ಕರುಣಾನಿಧಿ ಎಂಬ ದೂರದೃಷ್ಟಿಯುಳ್ಳ ಜವಳಿ ವ್ಯಾಪಾರಿ ಈ ಕಟ್ಟಡವನ್ನು ಪಡೆದರು. ಅವರು ೨೫ ವರ್ಷಗಳಿಗೂ ಹೆಚ್ಚು ಕಾಲ ವ್ಯಾಪಾರದಲ್ಲಿ ತೊಡಗಿದ್ದು, ತಿಂಗಳಿನಲ್ಲಿ ಸುಮಾರು ೨೫ ದಿನ ಪ್ರಯಾಣಿಸುತ್ತಿದ್ದರು. ಬಿಡುವಿಲ್ಲದ ಕಾರ್ಯಗಳ ಮಧ್ಯೆ ಕೂಡ ತಮ್ಮ ಕಾಲ ಮತ್ತು ಹಣವನ್ನು ಉತ್ತಮ ಕಾರ್ಯಗಳಲ್ಲಿ ತೊಡಗಿಸಿದರು. ಇತ್ತೀಚೆಗೆ ಭಗವತ್ಕೃಪೆಯಿಂದ ಅವರು ಅಪಘಾತ ವೊಂದರಿಂದ ಪಾರಾದರು. ಅವರು 'ಶಂಕರವಿಲಾಸ' ದ (ಈಗಿನ ರಾಮನಾಥಪುರಂ ಕೇಂದ್ರ) ಹಿಂಭಾಗದಲ್ಲಿ ವಾಸಿಸುತ್ತಿದ್ದಾರೆ ಮತ್ತು ಈ ಕೇಂದ್ರಕ್ಕೆ ಎಲ್ಲ ರೀತಿಯಿಂದಲೂ ಸಹಾಯ ಮಾಡುತ್ತಿದ್ದಾರೆ.

ಅಮರಾವತಿ ಪುದೂರ್ ಮತ್ತು ಕಣವೈ ಪುದೂರ್ ಕೇಂದ್ರಗಳ ಮುಖ್ಯಸ್ಥರಾದ ಸ್ವಾಮಿ ಆತ್ಮಾನಂದಜಿಯವರು, ಲೇಖಕರು ಮತ್ತು ಇತಿಹಾಸಕಾರರಾದ ಡಾ.ಎಸ್.ಎಂ. ಕಮಾಲ್ ಅವರ ಪ್ರಾರ್ಥನೆಯ ಮೇರೆಗೆ ಶ್ರೀ ಎಂ.ಎಸ್. ಕರುಣಾನಿಧಿಯವರಿಂದ ಶಿಥಿಲವಾದ ಕಟ್ಟಡ ಮತ್ತು ನಿವೇಶನವನ್ನು ೨೦೦೨ರಲ್ಲಿ ಕೊಂಡುಕೊಂಡರು. ಶ್ರೀ ಕರುಣಾನಿಧಿಯವರು ೩೦೦೦ ಚದರ ಅಡಿಗಳಷ್ಟು ಭೂಮಿ ಯನ್ನು ದಾನವಾಗಿ ಕೊಟ್ಟರು. ಉಳಿದ ಭಾಗವನ್ನು ತಾವು ಅರಮನೆ ಯವರಿಂದ ಕೊಂಡ ಬೆಲೆಗೆ ಕೊಟ್ಟರು. ಸ್ವಾಮಿ ಆತ್ಮಾನಂದಜಿ ಯವರು ಶಿಥಿಲವಾದ ಕಟ್ಟಡವನ್ನು ಒಡೆದು ಹಾಕಿ, ಅದರ ಸ್ಥಳದಲ್ಲಿ ೪೦ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಶ್ರೀರಾಮಕೃಷ್ಣರಿಗೆ ಒಂದು ಸುಂದರವಾದ ದೇವಾಲಯವನ್ನು ನಿರ್ಮಿಸಿದರು. ಗರ್ಭಗೃಹದ ಮುಂಭಾಗದಲ್ಲಿದ್ದ ಎರಡು ಕಂಬಗಳನ್ನು ಹಾಗೆಯೆ ಉಳಿಸಿಕೊಂಡು ಅವನ್ನು ಬಲಪಡಿಸಲಾಗಿದೆ. ಹೊಸ ಕಟ್ಟಡಕ್ಕೆ ಉಪಯೋಗಿಸಿರುವ ತೇಗದ ಮರಗಳನ್ನು ಬಹುಮಟ್ಟಿಗೆ ಹಳೆಯ ಕಟ್ಟಡದಿಂದ ತೆಗೆದು ಕೊಳ್ಳಲಾಗಿದೆ. ಅವನ್ನು ಮುಖ್ಯವಾಗಿ ದೇವಮಂದಿರದ ಬಾಗಿಲು ಮತ್ತು ಮುಖ್ಯ ದ್ವಾರದ ಬಾಗಿಲಿಗೆ ಉಪಯೋಗಿಸಲಾಗಿದೆ. ಹೊಸ ದೇವಸ್ಥಾನವನ್ನು ೨೦೦೭ರ ಆಗಸ್ಟ್ ೩೦ರಂದು ಚೆನ್ನೈ ಮಠದ ಅಧ್ಯಕ್ಷರಾದ ಸ್ವಾಮಿ ಗೌತಮಾನಂದಜಿ ಮಹಾರಾಜ್ ಅವರು ಶ್ರೀರಾಮಕೃಷ್ಣರಿಗೆ ಅರ್ಪಿಸಿದರು. ಹಿರಿಯ ಸಂನ್ಯಾಸಿಗಳಾದ ಸ್ವಾಮಿ ಸೋಮಾನಂದರು ಅಂದಿನ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಸ್ವಾಮಿ ಆತ್ಮಾನಂದಜಿಯವರು ಉದಾರ ಮನಸ್ಸಿನಿಂದ ಯಾವ ಷರತ್ತೂ ಇಲ್ಲದೆ ರಾಮಕೃಷ್ಣ ಮಿಷನ್ನಿನ ಕೇಂದ್ರವಾದ ಬೇಲೂರು ಮಠಕ್ಕೆ ಇದನ್ನು ಕೊಟ್ಟಿದ್ದಾರೆ. ಇದಕ್ಕಾಗಿ ನಾವು ಅವರಿಗೆ ಅಪಾರ ಕೃತಜ್ಞರಾಗಿದ್ದೇವೆ. ಬೇಲೂರಿನ ರಾಮಕೃಷ್ಣ ಸಂಘದ ಕೇಂದ್ರವು ೨೦೧೬ರ ಮೇ ೨೧ರ ಬುದ್ಧ ಪೂರ್ಣಿಮೆಯಂದು ಸ್ವಾಮಿ ಅಭಿರಾಮಾನಂದರನ್ನು ಈ ಕೇಂದ್ರದ ಅಧ್ಯಕ್ಷರನ್ನಾಗಿ ನೇಮಿಸಿತು.

ಈ ಸ್ಮಾರಕ ಕೇಂದ್ರವನ್ನು ರಾಮಕೃಷ್ಣ ಮಠಕ್ಕೆ ತೆಗೆದುಕೊಳ್ಳು ವಲ್ಲಿ ಚೆನ್ನೈ ಮಠದ ಅಧ್ಯಕ್ಷರಾದ ಸ್ವಾಮಿ ಗೌತಮಾನಂದಜಿ ಮಹಾ ರಾಜ್ ಅವರ ಪಾತ್ರ ಬಹು ಮುಖ್ಯವಾದುದು. ಈ ಕಾರ್ಯ ಸರಣಿಯ ಉದ್ದಕ್ಕೂ ಅವರು ಬೆಂಬಲ, ಮಾರ್ಗದರ್ಶನ ಮತ್ತು ಪ್ರೋತ್ಸಾಹದ ಆಗರವಾಗಿದ್ದರು. ನಮ್ಮ ಕೃತಜ್ಞತೆಯನ್ನು ಅವರಿಗೆ ಅರ್ಪಿಸಲು ಮಾತುಗಳು ಸಾಲದಾಗುತ್ತವೆ.



ರಾಮಕೃಷ್ಣ ಮಠದ ಹಸ್ತಾಂತರ ಸಮಾರಂಭದಲ್ಲಿ

ಈ ಕೇಂದ್ರವನ್ನು ರಾಮಕೃಷ್ಣ ಮಠ ಮತ್ತು ಮಿಷನ್ನಿಗೆ ಸೇರಿಸಿಕೊಳ್ಳುವ ಪ್ರಸ್ತಾಪ ಬಂದಾಗ, ರಾಮಕೃಷ್ಣ ಮಠ ಮತ್ತು ಮಿಷನ್ನಿನ ಮಹಾ ಕಾರ್ಯದರ್ಶಿಗಳಾದ ಸ್ವಾಮಿ ಸುಹಿತಾನಂದರು, ''ಸ್ವಾಮಿ ವಿವೇಕಾನಂದರ ಜೀವನಕ್ಕೆ ಸಂಬಂಧಪಟ್ಟ ಸ್ಮಾರಕಗಳನ್ನು ಮುಂದಿನ ಪೀಳಿಗೆಗಾಗಿ ನಾವು ಸಂರಕ್ಷಿಸಬೇಕು'' ಎಂದು ಉತ್ಸಾಹದಿಂದ ಸಮ್ಮತಿಸಿದರು. ಅವರ ಸೌಹಾರ್ದಯುತ ಸಮ್ಮತಿ ಇಲ್ಲದಿದ್ದರೆ, ಈ ಕೇಂದ್ರ ಅಸ್ತಿತ್ವಕ್ಕೆ ಬರುತ್ತಿರಲಿಲ್ಲ. ಇದಕ್ಕಾಗಿ ಅವರಿಗೆ ನಮ್ಮ ವಿನಮ್ರ ಪ್ರಣಾಮಗಳು.

### ಶ್ರೀ ಕಕ್ಕನ್ ಅವರ ಭೇಟಿ – ಒಂದು ಸ್ವಾರಸ್ಯಕರ ಘಟನೆ

೧೯೬೦ರ ಕಾಲದಲ್ಲಿ ತಮಿಳುನಾಡು ಸರಕಾರದಲ್ಲಿ ಶ್ರೀ ಕಕ್ಕನ್ ಅವರು ಗೃಹಮಂತ್ರಿಯಾಗಿದ್ದರು. ಆ ಕಾಲದಲ್ಲಿ ಸರ್ಕಾರಿ ಅಧಿಕಾರಿಗಳು 'ಶಂಕರವಿಲಾಸ'ದಲ್ಲಿ ತಂಗಲು ಅರಮನೆಯ ಅಧಿಕಾರಿಗಳ ಸಮ್ಮತಿ ಇತ್ತು. ಶ್ರೀ ಕಕ್ಕನ್ ಮಧ್ಯಾಹ್ನದ ಭೋಜನ ಮುಗಿಸಿ 'ಶಂಕರ ವಿಲಾಸ'ದ ಕೊಠಡಿಯಲ್ಲಿ ವಿಶ್ರಮಿಸಲು ಹೋದರು. ಅತಿಥಿಗೃಹದ ಸಿಬ್ಬಂದಿಯೊಬ್ಬ ಹೆಮ್ಮೆಯಿಂದ, ''ಸ್ವಾಮಿ ವಿವೇಕಾನಂದರು ರಾಮನಾಡಿಗೆ ಭೇಟಿಯಿತ್ತಾಗ ಇದೇ ಕೊಠಡಿಯಲ್ಲಿ ಇದ್ದರು'' ಎಂದು ಕಕ್ಕನ್ ಅವರಿಗೆ ಹೇಳಿದ. ದಿಗ್ಭ್ರಮೆಗೊಂಡ ಕಕ್ಕನ್ ಹಾಸಿಗೆಯಿಂದ ಥಟ್ಟನೆ ಎದ್ದು, ''ಯಾವ ಕೋಣೆ ಮಹಾನ್ ಸ್ವಾಮಿ ವಿವೇಕಾನಂದರಿಂದ ಪವಿತ್ರಗೊಳಿಸಲ್ಪಟ್ಟಿತ್ತೋ ಅದರಲ್ಲಿ ನಾನು ಇರಲು ಹೇಗೆ ಸಾಧ್ಯ?'' ಎಂದು ಹೇಳುತ್ತ ಆ ಕೋಣೆಯಿಂದ ಸರ್ರನೆ ಹೊರನಡೆದು ಅವರ ಕಾರಿನಲ್ಲೇ ವಿಶ್ರಾಂತಿ ಪಡೆದು ಹೋದರಂತೆ. ಈ ಘಟನೆಯನ್ನು ಶ್ರೀ ಎಂ.ಎಸ್. ಕರುಣಾನಿಧಿಯವರು ತಿಳಿಸಿದರು.

ಈ ಲೇಖನವನ್ನು ಶ್ರೀ ಜಿ.ಪಿ.ಶ್ರೀನಿವಾಸನ್ ಅವರ ಮಾತುಗಳಿಂದ ಕೊನೆಗೊಳಿಸುತ್ತೇವೆ: ''ಸ್ವಾಮಿ ವಿವೇಕಾನಂದರು ಚೆನ್ನೈ ನಗರಕ್ಕೆ ಭೇಟಿಯಿತ್ತಾಗ ತಂಗಿದ್ದ ಐಸ್ ಹೌಸ್ ಕಟ್ಟಡವನ್ನು ರಾಜ್ಯ ಸರ್ಕಾರ ಒಡೆದುಹಾಕಬೇಕೆಂದು ನಿರ್ಧರಿಸಿತು. ಆದರೆ, ಅದಕ್ಕೆ ಸ್ವಾಮಿ ವಿವೇಕಾನಂದರ ಸಂಬಂಧವಿದ್ದುದರಿಂದ ಅದನ್ನು ಒಡೆದು ಹಾಕದೆ ರಾಮಕೃಷ್ಣ ಮಠಕ್ಕೆ ಕೊಟ್ಟರು. ಮಠ ಅದನ್ನು ಸರಿಪಡಿಸಿ, ಅದನ್ನು ಒಂದು ಸ್ಮಾರಕ ಹಾಗೂ ಪ್ರದರ್ಶನ ಕೇಂದ್ರವನ್ನಾಗಿ ಮಾರ್ಪಡಿಸಿ ನಡೆಸುತ್ತಿದೆ... ನನ್ನ ಅಭಿಪ್ರಾಯದಲ್ಲಿ 'ಶಂಕರವಿಲ್ಲ', ವಿವೇಕಾನಂದ ಇಲ್ಲಮ್ ಮತ್ತು ಕನ್ಯಾಕುಮಾರಿಯ ಶಿಲಾಸ್ಮಾರಕದಷ್ಟೇ ಮುಖ್ಯವಾದುದು.''

### *ಆಕರ ಲೇಖನಗಳು ಮತ್ತು ಗ್ರಂಥಗಳು:*


Eastern and Western Disciples: ***Life of Swami Vivekananda,*** Advaita Ashrama, Kolkata.

Kamaal, S.M.: ***Mannar Bhaskara Sethu pathy*** (in Tamil), Sharmila Publishing House, Ramanathapuram, 1992.

Karunanidhi, M.S.: ***Shankara Vilasam, a historical perspective***, (in Tamil), Vivekananda Bharatham, September 2007.

Shailendra Nath Dhar: ***A Comprehensive Biography of Swami Vivekananda***, Viveka nanda Kendra Prakashan

Srinivasan, G.P.: ***The disappearance of a Vital Historical Monument***, Hindu Voice, March 2007.

Srinivasan, G.P.: ***A New Vivekananda Memorial at Ramanathapuram***, Hindu Voice, April 2007.

Swami Abhiramananda: ***Personal interview with Swami Ramananda***, Organisational Secre tary, Akhila Bharat Sannyasi Sangh, who directly supervised the demolition of Shankara Vilas building and construction of the new temple.

Swami Vivekananda: ***Memoirs of European Travels***, Advaita Ashrama, Kolkata. ❀


## ರಾಮನಾಡಿನ ರಾಜರನ್ನು ಕುರಿತು ಸ್ವಾಮೀಜಿ

''ನಮ್ಮ ಧರ್ಮದ ಮತ್ತು ಮಾತೃಭೂಮಿಯ ಪರವಾಗಿ ಏನಾದರೂ ಈ ದೀನ ವ್ಯಕ್ತಿಯು ಸ್ವಲ್ಪ ಕೆಲಸವನ್ನು ವಿದೇಶಗಳಲ್ಲಿ ಮಾಡಿದ್ದರೆ, ನಮ್ಮ ದೇಶದಲ್ಲಿ ಅಜ್ಞಾತವಾಗಿ, ಗುಪ್ತವಾಗಿ ಬಿದ್ದಿರುವ ರತ್ನರಾಶಿಯ ಕಡೆಗೆ ಜನರ ಗಮನವನ್ನು ಆಕರ್ಷಿಸಿ ಸ್ವದೇಶದ ಮೇಲೆ ವಿಶ್ವಾಸ ಹುಟ್ಟುವಂತೆ ನಾನು ಪ್ರಯತ್ನಿಸಿದ್ದರೆ, 'ಅಜ್ಞಾನಾಂಧಕಾರದಲ್ಲಿ ತೊಳಲುತ್ತಾ, ಬಾಯಾರಿಕೆಯಿಂದ ನರಳಿ ಸಾಯುತ್ತಾ, ಚರಂಡಿಯ ನೀರನ್ನು ಕುಡಿಯುವ ಬದಲು ತಮ್ಮ ಮನೆಯ ಬಳಿಯಲ್ಲೇ ಹರಿಯುತ್ತಿರುವ ಅಮೃತ ಪ್ರವಾಹವನ್ನು ಪಾನ ಮಾಡಿ' ಎಂದು ಹೇಳಿದ್ದರೆ, ನಮ್ಮ ದೇಶಬಾಂಧವರನ್ನು ಕಾರ್ಯೋನ್ಮುಖರನ್ನಾಗಿ ಮಾಡಿದ್ದರೆ, 'ಭಾರತದ ಪ್ರಾಣವೇ ಧರ್ಮ, ಅದು ಹೋದರೆ ರಾಜನೀತಿ, ಸಾಮಾಜಿಕ ಪ್ರಗತಿ ಕುಬೇರನ ಐಶ್ವರ್ಯ ಇವುಗಳೆಲ್ಲ ಇದ್ದರೂ ಭಾರತ ನಾಶವಾಗುವುದು' ಎಂಬ ಭಾವನೆಯನ್ನು ನನ್ನ ಬಾಂಧವರಲ್ಲಿ ಮೂಡುವಂತೆ ಮಾಡಿದ್ದರೆ, ಅಥವಾ ಹೊರಗೆ ಈ ಭಾವನೆ ಹರಡಿದ್ದರೆ, ಅದಕ್ಕೆಲ್ಲಾ ರಾಮನಾಡಿನ ರಾಜರೇ – ಇಡಿಯ ದೇಶವು ನಿಮಗೆ ಋಣಿ. ಏಕೆಂದರೆ ವಿದೇಶಗಳಿಗೆ ಹೋಗಬೇಕೆಂಬ ಭಾವನೆಯನ್ನು ಮೊದಲು ಕೊಟ್ಟವರು ನೀವು. ಅದನ್ನು ಕಾರ್ಯಗತಗೊಳಿಸಬೇಕೆಂದು ಪದೇಪದೇ ಒತ್ತಾಯ ಮಾಡಿದವರು ನೀವು.''

*('ರಾಮನಾಡಿನ ಬಿನ್ನವತ್ತಳೆಗೆ ಉತ್ತರ'ದಿಂದ, ಕೃತಿಶ್ರೇಣಿ ಸಂ.೩, ಪು.೩೭ )*




# ಪೊಳಲಿ ಶ್ರೀ ರಾಜರಾಜೇಶ್ವರಿ ದೇವಿ

**ಸೇವಂತಿ ಡಿ. ರೈ**

ದಕ್ಷಿಣ ಕನ್ನಡ ಜಿಲ್ಲೆಯ ಪೊಳಲಿ ಶ್ರೀ ರಾಜರಾಜೇಶ್ವರಿ ದೇವಿಯ ಹಿನ್ನೆಲೆ ಹಾಗೂ ನವರಾತ್ರಿ , ದುರ್ಗಾಪೂಜೆ, ದಸರಾ ಹಬ್ಬಗಳಲ್ಲಿ ಪಾರಾಯಣ ಮಾಡಲಾಗುವ 'ದುರ್ಗಾಸಪ್ತಶತೀ' ಗ್ರಂಥದಲ್ಲಿ ಬರುವ ಸುರಥ-ಸಮಾಧಿ ಇವರ ಕಥೆಗೆ ಅಲೌಕಿಕ ಸಂಬಂಧವಿರುವಂತೆ ಅಲ್ಲಿನ ಸ್ಥಳಪುರಾಣ ತಿಳಿಸುತ್ತದೆ. ಈ ಸಮಯೋಚಿತ ಲೇಖನವನ್ನು ಬರೆದ ಲೇಖಕಿ, ನಿವೃತ್ತ ಉಪನ್ಯಾಸಕರು ಹಾಗೂ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.

ಪ್ರಪಂಚದ ಪ್ರಾಚೀನ ನಾಗರಿಕತೆಗಳು ನದೀತೀರಗಳಲ್ಲಿ ಹುಟ್ಟಿ ಬೆಳೆದವು. ಫಲವತ್ತಾದ ಮಣ್ಣು, ಸಾಕಷ್ಟು ನೀರು ದೊರೆತಾಗ ಅಲೆಮಾರಿ ಆದಿಮಾನವನ ಮುಖ್ಯ ಉದ್ಯೋಗ ವ್ಯವಸಾಯವಾಯಿತು. ಆತ ಅಲ್ಲೇ ನೆಲೆನಿಂತ. ತನ್ನ ಬಿಡುವಿನ ಸಮಯದ ಸದುಪಯೋಗ ಮಾಡಿದ. ವಿಚಾರಶೀಲನಾಗಿ ಚಿಂತಿಸಿದ, ಯೋಚಿಸಿದ. ಇದಕ್ಕೆ ಭಾರತ ವೇನೂ ಹೊರತಾಗಿರಲಿಲ್ಲ. ನದೀತೀರಗಳಲ್ಲಿ ಭಾರತೀಯ ನಾಗರಿಕತೆ ಬೆಳೆಯಿತು. ಮಾನವನ ವಿಚಾರಶೀಲತೆ ನಿಂತ ನೀರಾಗದೆ ನದಿಯಂತೆ ಹರಿಯಿತು. ಮಹಾನ್ ಗ್ರಂಥಗಳು ರಚಿಸಲ್ಪಟ್ಟವು. ಸಂಶೋಧನೆಗಳು ನಡೆಯಿತು. ಇತಿಹಾಸ ಬೆಳೆಯಿತು.

ನದಿಗಳೆಲ್ಲವೂ ಜೀವನದಿಗಳೇ. ಭಾರತದಲ್ಲಿ ಪ್ರತಿ ನದಿಗೂ ಅದರದೇ ಆದ ದೇವತೆಗಳಿವೆ. ನದೀತಟಗಳಲ್ಲಿ ಪುಣ್ಯಕ್ಷೇತ್ರಗಳು ಬೆಳೆದವು. ಪುಣ್ಯಕ್ಷೇತ್ರಗಳಿಗೆ ತಮ್ಮದೇ ಆದ ನದಿ, ಸ್ಥಳಮಹಾತ್ಮೆ ಇದೆ.

ಈಗ ದಕ್ಷಿಣ ಕನ್ನಡ ಜಿಲ್ಲೆ ಎಂದು ಕರೆಯುವ ತುಳುನಾಡಿನಲ್ಲಿ ಅನೇಕ ಸಣ್ಣನದಿಗಳು ಸಹ್ಯಾದ್ರಿಯಲ್ಲಿ (ಪಶ್ಚಿಮ ಘಟ್ಟ) ಹುಟ್ಟಿ, ಪಶ್ಚಿಮಾಭಿಮುಖವಾಗಿ ಹರಿದು ಪಡುವಣ ಕಡಲನ್ನು ಸೇರುತ್ತವೆ. ಮೂಡಲ ಕಡಲನ್ನು(ಬಂಗಾಳ ಕೊಲ್ಲಿ) ಸೇರುವ ಕೃಷ್ಣೆ, ಕಾವೇರಿ ನದಿಗಳು ದೊಡ್ಡದಲ್ಲದಿದ್ದರೂ, ಈ ಚಿಕ್ಕ ನದಿಗಳು ಅಲ್ಲಿಯ ಜನರ ಸಾಮಾಜಿಕ ಮತ್ತು ಧಾರ್ಮಿಕ ಜೀವನದ ಮೇಲೆ ತುಂಬಾ ಪ್ರಭಾವ ಬೀರಿವೆ.

ಪ್ರತಿ ನದೀತಟದಲ್ಲೂ ಹಲವಾರು ಪುಣ್ಯಧಾಮಗಳಿವೆ. ಕರಾವಳಿ ಜಿಲ್ಲೆಯ ಮುಖ್ಯ ಕ್ಷೇತ್ರಗಳಲ್ಲಿ ಕುಮಾರಧಾರೆ ನದೀತೀರದ ಸುಬ್ರಹ್ಮಣ್ಯ, ನೇತ್ರಾವತೀ ನದಿಯ ಸಮೀಪದ ಧರ್ಮಸ್ಥಳ, ಸೌಪರ್ಣಿಕಾ ತಟದ ಕೊಲ್ಲೂರು, ಶಾಂಭವೀ ದಂಡೆಯಲ್ಲಿರುವ ಬಪ್ಪನಾಡು, ನಂದಿನೀ ನದಿ ಪ್ರದಕ್ಷಿಣೆ ಮಾಡುತ್ತಿರುವ - ಶ್ರೀದುರ್ಗಾಪರಮೇಶ್ವರಿ ನೆಲೆಸಿರುವ ಕಟೀಲು ಮತ್ತು ಫಲ್ಗುಣಿ ನದೀತೀರದ ಪೊಳಲಿ ಪ್ರಮುಖವಾದವುಗಳು. ಶ್ರೀರಾಜರಾಜೇಶ್ವರಿಗೆ ಪ್ರದಕ್ಷಿಣೆ ಬಂದು, ಮುಂದಕ್ಕೆ ಹರಿಯುತ್ತಾ ನೇತ್ರಾವತಿ ಜತೆ ಸೇರಿ ಸಮುದ್ರ ರಾಜನನ್ನು ಸಂಗಮಿಸುವ ಫಲ್ಗುಣಿ ನದಿ (ಗುರುಪುರ ಹೊಳೆ) ಪಶ್ಚಿಮ ಘಟ್ಟದ ಕುದುರೆಮುಖ ಪ್ರದೇಶದ ಮೂಲಕ ಹರಿಯುವ ಸಣ್ಣ ನದಿ.

ತುಳುನಾಡಿನಲ್ಲಿ ಮಾತೃಶಕ್ತಿಯ ಆರಾಧನೆ ವ್ಯಾಪಕವಾಗಿದೆ. ದುರ್ಗೆ, ಮಹಾಲಕ್ಷ್ಮೀ, ಮೂಕಾಂಬಿಕೆ, ಚಂಡಿಕಾದೇವಿ, ದುರ್ಗಾಪರಮೇಶ್ವರಿ, ರಾಜರಾಜೇಶ್ವರಿ, ಮಂಗಳಾದೇವಿ ಎಂದು ಮಂಗಳೂರು, ಪೊಳಲಿ, ಕಟೀಲು, ಕೊಲ್ಲೂರು, ಉದ್ಯಾವರ ಮೊದಲಾದೆಡೆ ದೇವಿಯನ್ನು ಅನೇಕ ರೂಪಗಳಲ್ಲಿ ಪೂಜಿಲಾಗುತ್ತಿದೆ.

ಅಶೋಕನ ಶಾಸನದಲ್ಲಿ ಪೊಳಲಿ ಕ್ಷೇತ್ರದ ಉಲ್ಲೇಖ ಇರುವುದರಿಂದ ಕ್ರಿ.ಪೂ.ದಲ್ಲೇ ಈ ಕ್ಷೇತ್ರ ಪ್ರಸಿದ್ಧಿ ಪಡೆದಿರಬೇಕು. ಅನೇಕ ವಿದೇಶೀ ಪ್ರವಾಸಿಗರೂ ಪೊಳಲಿ ಕ್ಷೇತ್ರಕ್ಕೆ ಭೇಟಿ ನೀಡಿದ್ದು, ಈ

ಕ್ಷೇತ್ರದ ಬಗ್ಗೆ ಬರೆದಿದ್ದಾರೆ. ರಾಜರಾಜೇಶ್ವರಿಯ ಬೃಹತ್ ಗಾತ್ರದ ಮೃಣ್ಮಯೀ ಮೂರ್ತಿಯನ್ನು ಕಂಡು ಆಶ್ಚರ್ಯಚಕಿತನಾದ ಚೀನೀ ಯಾತ್ರಿಕ ಹ್ಯೂಯನ್ ತ್ಸಾಂಗ್ (ಕ್ರಿ.ಶ. ೭ನೇ ಶತಮಾನ), ''ಇಡೀ ಹಿಂದೂಸ್ಥಾನದಲ್ಲಿ ಇಂತಹ ಮಹಾಶಕ್ತಿಯುಳ್ಳ ವಿಗ್ರಹವನ್ನು ನಾನು ಬೇರೆಲ್ಲೂ ನೋಡಿಲ್ಲ'' ಎಂದು ಉದ್ಗಾರವೆತ್ತಿದ್ದಾನೆ.

ಒಂದು ಐತಿಹ್ಯದ ಪ್ರಕಾರ ಸುರಥ ಎಂಬ ರಾಜ, ಈ ದೇವಾಲಯವನ್ನು ಕಟ್ಟಿಸಿ, ವಿಗ್ರಹವನ್ನು ನಿರ್ಮಿಸಿ, ತನ್ನ ಕಿರೀಟವನ್ನು ದೇವಿಯ ಮೂರ್ತಿಗೆ ಸಮರ್ಪಿಸಿರುವುದಾಗಿ ತಿಳಿದುಬರುತ್ತದೆ. ಆ ನವರತ್ನ ಕಿರೀಟ ದೇವಿಯ ಶಿರವನ್ನು ಇಂದಿಗೂ ಅಲಂಕರಿಸಿದೆ. (ಆದರೆ ಸುರಥ ಮಹಾರಾಜನ ಕಾಲ ತಿಳಿದುಬಂದಿಲ್ಲ.)

ಕೆಳದಿಯ ರಾಣಿ ಚೆನ್ನಮ್ಮಾಜಿ ಇಲ್ಲಿಯ ದೇವಸ್ಥಾನಕ್ಕೆ ಬಂದು ಪೂಜೆ ಸಲ್ಲಿಸಿ, ಒಂದು ಮಹಾರಥವನ್ನು ಮಾಡಿಸಿಕೊಟ್ಟಳು (೧೭ನೇ ಶತಮಾನ). ಈಗ ಆ ರಥ ಶಿಥಿಲಗೊಂಡಿದ್ದು, ಹೊಸ ರಥವನ್ನು ಮಾಡಿ ೧೯೯೨ ರಲ್ಲಿ ದೇವಾಲಯಕ್ಕೆ ಅರ್ಪಿಸಲಾಗಿದೆ.

೧೮ನೇ ಶತಮಾನದ ಕೊನೆಯ ದಶಕದಲ್ಲಿ ಬ್ರಿಟಿಷರ ವಿರುದ್ಧ ಯುದ್ಧ ಮಾಡುತ್ತಾ ಮಂಗಳೂರು ತಲುಪಿದ್ದ ಟಿಪ್ಪು ಸುಲ್ತಾನ್, ಪೊಳಲಿಯ ಚೆಂಡಿನ ಉತ್ಸವದ ಖ್ಯಾತಿಯನ್ನು ಕೇಳಿ ಅದನ್ನು ನೋಡಲು ಇಚ್ಛಿಸಿದ. ಆ ಸಮಯದಲ್ಲಿ ಪೊಳಲಿಯಲ್ಲಿ ಚೆಂಡಿನ ಉತ್ಸವ ನಡೆಯುತ್ತಿತ್ತು. ಸಾವಿರಾರು ಜನರು ಸೇರಿದ್ದರು. ಆ ಚೆಂಡಿನ ಉತ್ಸವವನ್ನು ಸರಿಯಾಗಿ ವೀಕ್ಷಿಸಿ ಆನಂದಿತನಾಗಬೇಕೆಂದು ಟಿಪ್ಪುಸುಲ್ತಾನನು ಚೆಂಡಿನಾಟದ ಬಯಲಿನಿಂದ ಸ್ವಲ್ಪ ದೂರದಲ್ಲಿ ಒಂದು ಎತ್ತರವಾದ ಕಟ್ಟೆ ಕಟ್ಟಿಸಿ, ಅಲ್ಲಿ ಕುಳಿತು ಪೊಳಲಿಯ ಚೆಂಡಿನಾಟವನ್ನು ವೀಕ್ಷಿಸಿದನಂತೆ. ಆ ಕಟ್ಟೆಯನ್ನು **ಸುಲ್ತಾನ್ ಕಟ್ಟೆ** ಎಂದೇ ಈಗಲೂ ಕರೆಯುತ್ತಾರೆ.

ಸ್ಥಳಪುರಾಣಗಳನ್ನು ಬಹಳ ಪ್ರಾಚೀನ ಕಾಲದಿಂದಲೂ ನಮ್ಮ ಪೂರ್ವಜರು ಬರೆದಿಡುತ್ತಿದ್ದರು. ತಾನು ನಂಬಿದ ದೇವದೇವತೆಗಳನ್ನು ಮೂರ್ತಿರೂಪದಲ್ಲಿ ಆರಾಧಿಸಿ, ಅದಕ್ಕೊಂದು ಗುಡಿ ಕಟ್ಟಿ ಆರಾಧಿಸುತ್ತಿದ್ದ ನಮ್ಮ ಪೂರ್ವಜರು ಆ ಗುಡಿಯ ಸ್ಥಾಪನೆಯ ಹಿನ್ನೆಲೆ, ಆ ದೇವತೆಯ ಮಹಿಮೆ, ಆ ದೇವಾಲಯದ ಜೀರ್ಣೋದ್ಧಾರಕ್ಕೆ ಕಾರಣಕರ್ತರು ಇತ್ಯಾದಿ ವಿಷಯಗಳನ್ನು ಬರೆದಿಡುತ್ತಿದ್ದರು; ಅಥವಾ ಬಂಡೆಯ ಮೇಲೆ ಕೊರೆದಿಡುತ್ತಿದ್ದರು ಇಲ್ಲವೆ ಶಿಲಾಶಾಸನದಲ್ಲಿ ಕೊರೆಸುತ್ತಿದ್ದರು. ಒಂದು ಚಿಕ್ಕ ದೇವಾಲಯಕ್ಕೂ ಅದರದೇ ಆದ ಸ್ಥಳಪುರಾಣ ಇರುತ್ತದೆ. ಆದರೆ ಇಷ್ಟು ಪ್ರಸಿದ್ಧವಾದ, ಸಾವಿರ ಸೀಮೆಯ ದೇವಾಲಯವಾದ, ಪೊಳಲಿ ರಾಜರಾಜೇಶ್ವರಿ ದೇವಾಲಯದ ಸ್ಥಳಪುರಾಣ ದೊರೆಯದಿರುವುದು ಆಶ್ಚರ್ಯದ ವಿಷಯವಾಗಿದೆ; ಸಂಶೋಧನೆಗೆ ಅರ್ಹವಾಗಿದೆ.

ಕ್ರಿ.ಶ. ೧೮೪೭ರಲ್ಲಿ ಬಹಳ ದೊಡ್ಡ ಪ್ರವಾಹವೊಂದು ಫಲ್ಗುಣಿ ನದಿಯಲ್ಲುಂಟಾಗಿ, ನೆರೆಯ ನೀರಿಗೆ, ಗರ್ಭಗುಡಿಯೊಂದನ್ನು ಉಳಿದು ದೇವಸ್ಥಾನದ ಉಳಿದ ಎಲ್ಲಾ ಕಟ್ಟಡಗಳೂ, ಗ್ರಂಥಗಳೂ ಕೊಚ್ಚಿಕೊಂಡು ಹೋಗಿದ್ದಿರಬೇಕು.



ಶ್ರೀ ರಾಜರಾಜೇಶ್ವರಿಯ ಮೃಣ್ಮಯ ವಿಗ್ರಹ

*ಮಾರ್ಕಂಡೇಯ ಪುರಾಣ* ದಲ್ಲಿ ಈ ಕ್ಷೇತ್ರಕ್ಕೆ **ಪುಳಿನ** ಎಂಬ ಹೆಸರಿದ್ದುದು ಕಂಡುಬರುತ್ತದೆ. ಪುಳಿನ ಎಂದರೆ ನೀರಿನಿಂದ ಎದ್ದು ಬಂದ ಪ್ರದೇಶ ಎಂಬ ಅರ್ಥ ಇದೆ. ಅಂದರೆ ಪ್ರಾಚೀನ ಕಾಲದಲ್ಲಿ ಈ ಪ್ರದೇಶದಲ್ಲಿ ಫಲ್ಗುಣಿ ನದಿ ಹರಿಯುತ್ತಿದ್ದು, ಕ್ರಮೇಣ ಈ ಪ್ರದೇಶದಿಂದ ನದಿ ದೂರ ಸರಿದಿರಬೇಕು. ಈ ದೇವಾಲಯ ಇರುವುದು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲೂಕಿನ ಕರಿಯಂಗಳ ಗ್ರಾಮದಲ್ಲಿ. ಇಲ್ಲಿ ದೊರೆತ ಕ್ರಿ.ಶ. ೮ನೇ ಶತಮಾನದ ಶಾಸನದಲ್ಲಿ ಈ ಕ್ಷೇತ್ರವನ್ನು 'ಹೊಳಲ್' ಎಂದು ಕರೆಯಲಾಗಿದೆ. ಹೊಳಲ್ ಎಂದರೆ ಪಟ್ಟಣ. ಬಹಳ ಹಿಂದೆ ಈ ಪ್ರದೇಶ ಒಂದು ಪಟ್ಟಣವಾಗಿದ್ದಿರಬೇಕು. ೧೮೪೭ರ ಪ್ರವಾಹ ಇಲ್ಲಿದ್ದ ಮನೆ, ಮಠ, ಅರಮನೆ ಸೇರಿದಂತೆ ಪಟ್ಟಣವನ್ನೇ ಕೊಚ್ಚಿಕೊಂಡು ಹೋಗಿರಬೇಕು. ಈ ಪ್ರದೇಶ ರಾಜಧಾನಿಯಾಗಿತ್ತು ಎಂಬುದಕ್ಕೆ ಕೆಲವು ಕುರುಹುಗಳು ದೊರೆತಿವೆ. ಹೊಳಲ್ ಎಂಬ ಪದ ಕ್ರಮೇಣ ಪೊಳಲಿ ಎಂದಾಗಿದ್ದು, ತುಳುಭಾಷೆಯಲ್ಲಿ ''ಪುರಾಲ್'' ಎನಿಸಿದೆ.

ನಮ್ಮ ನಾಡಿನ ಪುಣ್ಯಕ್ಷೇತ್ರಗಳಲ್ಲಿ ಒಂದಾದ ಪೊಳಲಿಯ ಶ್ರೀರಾಜರಾಜೇಶ್ವರಿ ದೇವಿ, ತನ್ನ ನಂಬಿದವರನ್ನು ಕೈ ಬಿಡದೆ ಮುನ್ನಡೆಸುತ್ತಿರುವ ಕರುಣಾಮಯಿ ಎಂದು ಭಕ್ತರ ನಂಬಿಕೆ. ದೇವಾಲಯದ ಗರ್ಭಗುಡಿಯೊಳಗಿರುವ ಶ್ರೀ ರಾಜರಾಜೇಶ್ವರಿಯ ಭವ್ಯವಾದ ಮೃಣ್ಮಯ ಮೂರ್ತಿ ಅದ್ಭುತವಾಗಿದೆ. ಬೇರೆಲ್ಲೂ ಕಾಣಸಿಗದ, ವಿಶೇಷ ಆಕರ್ಷಣೆ, ತೇಜಸ್ಸು ಈ ರಮ್ಯವಾದ ಮೂರ್ತಿಯಲ್ಲಿದೆ.

ಜಗತ್ತಿನ ಇತರ ದೇಶಗಳಲ್ಲಿರುವಂತೆ ಪೊಳಲಿಯ ದೇವಾಲಯದ ಪ್ರತಿಮೆಯನ್ನು ಕಲ್ಲು, ಮರ, ಅಥವಾ ಲೋಹದಿಂದ

ಮಾಡಿರುವುದಿಲ್ಲ. ಇದು ಮೃಣ್ಮಯ ಮೂರ್ತಿ. ಅಂದರೆ ಮಣ್ಣಿನಿಂದ ಮಾಡಿದ ಪ್ರತಿಮೆ. ವಿಶಿಷ್ಟವಾದ ಪರಿಪಾಕ ಪಡೆದ ಮಣ್ಣಿನಿಂದ ತಯಾರಿಸಿದ ವಿಗ್ರಹ ಇದು. ಒಂಬತ್ತು ಅಡಿಗೂ ಹೆಚ್ಚಿನ ಎತ್ತರ ಇರುವ, ಇಷ್ಟು ದೊಡ್ಡದಾದ ಮಣ್ಣಿನ ಪ್ರತಿಮೆ ಭಾರತದ ಯಾವ ಪ್ರದೇಶದಲ್ಲೂ ಇಲ್ಲ.

ಪೂಜೆಯ ವೇಳೆಯಲ್ಲಿ ಸರ್ವಾಲಂಕಾರಗೊಂಡ ರಾಜರಾಜೇಶ್ವರಿ ಮೂರ್ತಿಯ ದರ್ಶನ ಪಡೆದು ಪುನೀತರಾಗಲು ಭಕ್ತಾದಿಗಳು ದೇಶದ ಎಲ್ಲೆಡೆಗಳಿಂದ ಬರುತ್ತಾರೆ. ಭಕ್ತರಲ್ಲಿ ಅರಸರು, ಮಂತ್ರಿಗಳು, ಅಧಿಕಾರಿಗಳು, ಜನಸಾಮಾನ್ಯರು ಎಲ್ಲರೂ ಇರುತ್ತಾರೆ. ಮೈಸೂರು ರಾಜ್ಯದಲ್ಲಿ ಅರಸರಾಗಿದ್ದ ಶ್ರೀ ಜಯಚಾಮರಾಜ ಒಡೆಯರು ಪೊಳಲಿಗೆ ನಾಲ್ಕು ಬಾರಿ ಬಂದಿದ್ದು, ಶ್ರೀರಾಜರಾಜೇಶ್ವರೀ ದೇವಿಗೆ ತಮ್ಮ ಸೇವೆ ಸಲ್ಲಿಸಿದ್ದರು. ದೇವಿಯ ವಿಗ್ರಹಕ್ಕೆ ತೊಡಿಸಲು ಆಭರಣ ಕೊಟ್ಟಿದ್ದರು. ದೇವಾಲಯದ ಸೇವಾಕಾರ್ಯಗಳಿಗೆ ಕಾಣಿಕೆ ಸಲ್ಲಿಸಿದ್ದರು.

ಈ ದೇವಾಲಯದ ಹಿರಿಯ ಭಕ್ತರಾದ ಏರ್ಯ ಲಕ್ಷ್ಮೀನಾರಾಯಣ ಆಳ್ವರು, ''ಸರ್ವಾಲಂಕಾರಭೂಷಿತವಾದ ಈ ವಿಗ್ರಹವನ್ನು ಕಂಡಾಗಲೆಲ್ಲ ಹೃದಯ ಭಕ್ತಿಭರಿತವಾಗಿ ಪ್ರಶಾಂತ ಮನಃಸ್ಥಿತಿ ಪಡೆದು, ರೋಮಾಂಚಿತವಾಗುತ್ತದೆ. ವಿಗ್ರಹದಲ್ಲಿ ಇಟ್ಟ ನೆಟ್ಟ ದೃಷ್ಟಿಯನ್ನು ಹಿಂದೆ ತೆಗೆಯಲಾಗದ ಭಾವತನ್ಮಯತೆ ಹೊಂದುತ್ತೇವೆ. ಸರ್ವಾಲಂಕೃತ ತಾಯಿಯ ತುಂಬು ದರ್ಶನದಿಂದ ನಮ್ಮ ಮನಸ್ಸು ತುಂಬಿ, ಎದೆ ತುಂಬಿ, ಹರ್ಷೋತ್ಕರ್ಷದಿಂದ ತುಂಬು ನಯನರಾಗುತ್ತೇವೆ. ಹೀಗೆ ಹೃದಯ ಮನಸ್ಸನ್ನು ಏಕೀಭವಿಸಿ ಏಕಾಗ್ರಗೊಳಿಸುವ, ನಮ್ಮನ್ನು ನಾವೇ ಮರೆಯುವಂತೆ ಮಾಡುವ ಇಂತಹ ಅಪೂರ್ವ ಮೃಣ್ಮಯ ಮೂರ್ತಿ ಸಮಗ್ರ ಭಾರತದಲ್ಲಿ ಎಲ್ಲೂ ಇಲ್ಲ'' ಎಂದಿದ್ದಾರೆ.

ಶತಶತಮಾನಗಳಿಂದ ಜನರ ಮೊರೆಯನ್ನು ಕೇಳಿ ಅವರಿಗೆ ಸಮಾಧಾನವನ್ನೀಯುತ್ತಿರುವ ಶ್ರೀರಾಜರಾಜೇಶ್ವರಿ ದೇವಿಯ ಮೃಣ್ಮಯ ಮೂರ್ತಿಯಲ್ಲಿರುವ ವಿಶೇಷತೆಯನ್ನು ನಾವು ಇನ್ನೆಲ್ಲೂ ಕಾಣಲಾರೆವು. ಈ ದೇಗುಲದ ಗರ್ಭಗುಡಿಯೊಳಗಿರುವ ಮೂರ್ತಿಗಳಿಗೆ ಹನ್ನೆರಡು ವರ್ಷಗಳಿಗೊಮ್ಮೆ 'ಲೇಪಾಷ್ಟಗಂಧ ಕ್ರಿಯೆ'ಯು ನಡೆಯುತ್ತದೆ. ಆ ಸಮಯದಲ್ಲಿ ಕ್ರಮಬದ್ಧವಾಗಿ ಬ್ರಹ್ಮಕಲಶೋತ್ಸವ ನಡೆಯುತ್ತದೆ. ಮೂರ್ತಿಗಳಿಗೆ ಬಣ್ಣಹಾಕುವ ಲೇಪಾಷ್ಟಗಂಧ ಕ್ರಿಯೆಯನ್ನು ಅದಕ್ಕೆ ಸಂಬಂಧ ಪಟ್ಟ ತಂತ್ರಿಗಳೇ ಮಾಡಬೇಕು. ಲೇಪಾಷ್ಟಗಂಧದ ಮಣ್ಣನ್ನು ಶತಶತಮಾನಗಳ ಹಿಂದೆ ಸಿದ್ಧಪಡಿಸಿ ಗರ್ಭಗೃಹದೊಳಗೆ ಒಂದಡೆ ಇಡಲಾಗಿದೆ. ವಿವಿಧ ಮರಗಳ ವಿಶಿಷ್ಟ ರಸವನ್ನು ತೆಗೆದು ಮೂರ್ತಿಯ ತಯಾರಿಗೆ ಬೇಕಾದ ಮಣ್ಣಿಗೆ ಬಳಸಿ, ಆ ಮಣ್ಣಿಗೆ ಕಲ್ಲಿನ ಬಲ ಬರುವಂತೆ ಅಂಟಾಗಿ ಹದಗೊಳಿಸಿ ಬೃಹತ್ ಮೂರ್ತಿ ತಯಾರಿಸಲಾಗಿತ್ತು. ಆ ಪಾಕಗೊಂಡ ಮಣ್ಣನ್ನು ಇಷ್ಟು ಶತಮಾನಗಳ ಬಳಿಕವೂ ಲೇಪಾಷ್ಟಗಂಧದ ಸಮಯದಲ್ಲಿ ಉಪಯೋಗಿಸಲಾಗುತ್ತಿದೆ. ತಲೆತಲಾಂತರದಿಂದ ವಿಶೇಷವಾಗಿ ಪಾಕಗೊಂಡ ಮಣ್ಣನ್ನೇ ಉಪಯೋಗಿಸಲಾಗಿದ್ದು, ಇನ್ನು ಮುಂದೆ ಕೂಡ ಇದೇ ವಿಶೇಷ ಮಣ್ಣನ್ನು ಉಪಯೋಗಿಸುವಂತೆ ತೆಗೆದಿಡಲಾಗಿದೆ. ಈ ವಿಶೇಷ ಶಕ್ತಿಯುತವಾದ ಮಣ್ಣನ್ನು ಹೇಗೆ ತಯಾರಿಸುವುದೆಂದು ಇಂದಿನವರೆಗೂ ತಿಳಿದು ಬಂದಿಲ್ಲ!

ಈ ದೇವಾಲಯದ ಇನ್ನೊಂದು ವಿಶೇಷತೆ ಎಂದರೆ ಇಲ್ಲಿಯ ಬಲಿ. (ದೇವರ ಉತ್ಸವಮೂರ್ತಿಯೊಂದಿಗೆ ವಾದ್ಯ, ಸಂಗೀತ, ಮೆರವಣಿಗೆ ಸಮೇತ ದೇವಾಲಯದ ಸುತ್ತ ಪ್ರದಕ್ಷಿಣೆ ಬರುವುದನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಬಲಿ' ಎನ್ನುತ್ತಾರೆ.) ಎಲ್ಲ ಉತ್ಸವಗಳು, ಬಲಿ, ರಥಾರೋಹಣ ಎಲ್ಲವೂ ತಾಯಿ ರಾಜರಾಜೇಶ್ವರಿಯ ಹೆಸರಿನಲ್ಲಿ ನಡೆಯುತ್ತಿದೆ. ಆದರೆ ನಿತ್ಯದ ಬಲಿಯಾಗಲಿ, ಉತ್ಸವ ಬಲಿಯಾಗಲಿ, ರಥಾರೋಹಣ, ಸಂಭ್ರಮದ ಮೆರವಣಿಗೆ ಎಲ್ಲವೂ ಸುಬ್ರಹ್ಮಣ್ಯನಿಗೆ. (ಈ ವಿಗ್ರಹ ಕಂಚಿನದು.) ತಾಯಿಯ ಹೆಸರಿನಲ್ಲಿ ಮಗನಿಗೆ ನಡೆಯುವ ಈ ಸಂಭ್ರಮವನ್ನು ನಾವು ಇನ್ನೆಲ್ಲೂ ಕಾಣಲಾರೆವು. ಪ್ರಧಾನ ದೇವತೆಯನ್ನುಳಿದು, ಪರಿವಾರ ದೇವತೆಗೆ ಬಲಿ ಉತ್ಸವ ನಡೆಯುವುದು ಪೊಳಲಿ ಕ್ಷೇತ್ರದ ಉಲ್ಲೇಖನೀಯವಾದ ವೈಶಿಷ್ಟ್ಯ.

ಇಲ್ಲಿಯ ಮತ್ತೊಂದು ವಿಶೇಷತೆ ಎಂದರೆ ಪ್ರಧಾನ ದೇವತೆ ಶ್ರೀರಾಜರಾಜೇಶ್ವರಿಯಾಗಿದ್ದರೂ, ಈ ದೇವಸ್ಥಾನಕ್ಕೆ ಸಂಬಂಧಿಸಿದ ಭೂಮಿ ಇರುವುದು ಶ್ರೀ ದುರ್ಗಾಪರಮೇಶ್ವರಿಯ ಹೆಸರಿನಲ್ಲಿ. ಅಲ್ಲದೆ ತಸ್ತೀಕು ಎಂದು ಕರೆಯಲ್ಪಡುವ, ಸರಕಾರದಿಂದ ದೇವಸ್ಥಾನದ ಖರ್ಚಿಗಾಗಿ ಬರುವ ಪರಿಮಿತ ಹಣ ಕೂಡಾ ಶ್ರೀ ದುರ್ಗಾಪರಮೇಶ್ವರಿಯ ಹೆಸರಿಗೇ ಬರುತ್ತಿದೆ. ಮುಖ್ಯ ದೇವಸ್ಥಾನದ ಹೊರ ಅಂಗಣದಲ್ಲಿ ಶ್ರೀದುರ್ಗಾಪರಮೇಶ್ವರಿಯ ಒಂದು ಗುಡಿ ಇದೆ. ಈ ಮೂರ್ತಿಯನ್ನು ಶಿಲೆಯಿಂದ ಮಾಡಲಾಗಿದೆ.

ಗರ್ಭಗುಡಿಯೊಳಗಿರುವ ಎಲ್ಲಾ ವಿಗ್ರಹಗಳೂ ಮಣ್ಣಿನಿಂದ ಮಾಡಲ್ಪಟ್ಟಿವೆ. ಮುಖ್ಯ ದೇವಾಲಯದ ಕ್ಷೇತ್ರಪಾಲ ವಿಗ್ರಹಗಳು ಮರದಿಂದ ಮಾಡಲ್ಪಟ್ಟಿವೆ. ಸುಬ್ರಹ್ಮಣ್ಯ ಸ್ವಾಮಿಯ ಉತ್ಸವ ಮೂರ್ತಿ ಕಂಚಿನಿಂದ ಮಾಡಲ್ಪಟ್ಟಿದೆ.

ತುಳುನಾಡಿನ ಹೆಚ್ಚಿನ ದೇವಸ್ಥಾನಗಳಲ್ಲಿ ಆ ಕ್ಷೇತ್ರದ ಒಂದು ದೈವ ಇರುತ್ತದೆ. ಅವುಗಳಿಗೂ ದೇವಾಲಯದ ಆವರಣದೊಳಗೆ ಗುಡಿ ಇರುತ್ತದೆ. ಪೊಳಲಿ ಕ್ಷೇತ್ರದ ಪ್ರಧಾನ ದೈವ ಕೂಡ ಮೃಣ್ಮಯ. ಈ ದೈವಕ್ಕೆ ಆರಾಟದ ಮರುದಿನ ವಿಜೃಂಭಣೆಯಿಂದ ಗೋಪುರದ ಬಾಗಿಲಲ್ಲಿ ನೇಮ ನಡೆಯುತ್ತದೆ.

ಪೊಳಲಿ ಕ್ಷೇತ್ರದ ಮಗದೊಂದು ವಿಶೇಷತೆ ಎಂದರೆ ಮೀನ ಸಂಕ್ರಮಣದಿಂದ ಒಂದು ತಿಂಗಳು ನಡೆಯುವ **ಪೊಳಲಿ ಉತ್ಸವ.** ಮೀನ ಸಂಕ್ರಮಣದಂದು (ತುಳುವಿನಲ್ಲಿ 'ಸುಗ್ಗಿ ಸಂಕ್ರಾಂತಿ') ದೇವಸ್ಥಾನದಲ್ಲಿ ಕೊಡಿ (ಧ್ವಜಾರೋಹಣ – ಧ್ವಜ ಸ್ತಂಭಕ್ಕೆ ಗರುಡನನ್ನು ಏರಿಸುವುದು) ಏರಿಸುವರು. ಅನಂತರ ಒಂದು ತಿಂಗಳ ದೀರ್ಘ ಕಾಲದ ಉತ್ಸವ ನಡೆಯುತ್ತದೆ. ಈ ಸಮಯದಲ್ಲಿ ಉತ್ಸವ ಮೂರ್ತಿಯ ಪ್ರಭಾವಳಿಯ ಸುತ್ತ ಕೇಪುಳೆ (ಇಕ್ಸೋರಾ) ಹೂವಿನ ದಂಡೆಯಾಕಾರದ ಮಾಲೆಯನ್ನು ಹಾಕುತ್ತಾರೆ. ಐದನೇ ದಿನ

ಹಳೆಯ ಹೂವಿನ ದಂಡೆಯನ್ನು ತೆಗೆದು ಹೊಸ ಕೇಪುಳೆ ಹೂವಿನ ದಂಡೆಯನ್ನು ಕಟ್ಟುತ್ತಾರೆ. ಇದೇ ದಂಡೆಮಾಲೆ ಉತ್ಸವ. ಪ್ರತಿ ೫ ದಿನಗಳಿಗೊಮ್ಮೆ ಕೇಪುಳೆ ಹೂವಿನ ಹೊಸ ದಂಡಮಾಲೆಯನ್ನು ಪ್ರಭಾವಳಿಗೆ ಇರಿಸಿ, 'ದಂಡ ಮಾಲೋತ್ಸವ' ನಡೆಯುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ದೇವಸ್ಥಾನಗಳಲ್ಲಿ ವರ್ಷಕ್ಕೊಮ್ಮೆ ನಡೆಯುವ ಉತ್ಸವದ ಸಂದರ್ಭದಲ್ಲಿ, ಆ ಊರಿನ ಜನ ದೇವ ಸ್ಥಾನಕ್ಕೆ ಸೇರಿದ ಬಯಲಿನಲ್ಲಿ ಚೆಂಡಿನಾಟವನ್ನು ಆಡುತ್ತಾರೆ. ಪೊಳಲಿಯ ಚೆಂಡಿನಾಟದ ವಿಶೇಷತೆ ಎಂದರೆ, ಇಲ್ಲಿಯ ಚೆಂಡು. ಚೆಂಡಿನ ಗಾತ್ರ ದೊಡ್ಡದು. ಹೊರಮೈ ಚರ್ಮದಿಂದ ಮಾಡಲ್ಪಟ್ಟು ಒಳಗೆ ತೆಂಗಿನ ನಾರನ್ನು ತುಂಬಿರುತ್ತಾರೆ. ೫ ದಿನಗಳ ಈ ಚೆಂಡಿ ನಾಟವನ್ನು ನೋಡಲು ಸಹಸ್ರಾರು ಜನರು ಸೇರುತ್ತಾರೆ. ಇಲ್ಲಿಯ ಚೆಂಡಿನಾಟದ ಪ್ರಸಿದ್ಧಿ ಎಷ್ಟೆಂದರೆ, ಪೊಳಲಿ ಉತ್ಸವವನ್ನೇ **ಪೊಳಲಿ ಚೆಂಡು** ಎಂಬ ಪರ್ಯಾಯ ಹೆಸರಿನಿಂದ ಕರೆಯುತ್ತಾರೆ.

ಶ್ರೀರಾಜರಾಜೇಶ್ವರೀ ದೇವಿಯ ಗರ್ಭಗುಡಿಯು ನಾಲ್ಕು ಅಡಿ ಎತ್ತರದ ನೆಲಗಟ್ಟಿನ ಮೇಲೆ ಪೂರ್ವಾಭಿಮುಖವಾಗಿ ಕಟ್ಟಲ್ಪಟ್ಟಿದೆ. ಅತಿ ದೊಡ್ಡದಲ್ಲದ ಮಧ್ಯ ಪ್ರಮಾಣದ ಈ ದೇವಾಲಯದ ಎಲ್ಲಾ ಭಾಗಗಳೂ, ದೇವತಾಮೂರ್ತಿಗಳೂ, ಅಲಂಕಾರಿಕ ಕೆತ್ತನೆಗಳೂ ಶಿಲ್ಪಶಾಸ್ತ್ರಕ್ಕೆ ಅನುಗುಣವಾಗಿ ರಚಿಸಲ್ಪಟ್ಟಿವೆ. ಗರ್ಭಗೃಹದ ಒಳಭಾಗ ದಲ್ಲಿ ದಕ್ಷಿಣೋತ್ತರವಾಗಿ ೩ ಅಡಿ ಎತ್ತರ, ೩ ಅಡಿ ಅಗಲದ ವೇದಿಕೆ ಇದೆ. ಪ್ರಧಾನ ದ್ವಾರಕ್ಕೆ ಎದುರಾಗಿ ಮಹಾಸಿಂಹಾಸನವಿದೆ. ಸಿಂಹಾ ಸನದಲ್ಲಿ ವರ ಮತ್ತು ಅಭಯ ಮುದ್ರೆಗಳನ್ನು ಧರಿಸಿದ ಶ್ರೀ ರಾಜರಾಜೇಶ್ವರಿ ದೇವಿಯ ವಿಗ್ರಹ ಪ್ರತಿಷ್ಠಾಪಿಸಲ್ಪಟ್ಟಿದೆ. ದೇವಿಯ ವಿಗ್ರಹದ ಹಿಂಬದಿಯ ಎಡ ಮತ್ತು ಬಲ ಭಾಗದಲ್ಲಿ ಚಾಮರಧಾರಿಣಿ ಯಾದ ಲಕ್ಷ್ಮೀ ಮತ್ತು ಸರಸ್ವತೀ ದೇವಿ ಯರ ವಿಗ್ರಹಗಳಿವೆ. ಸುಬ್ರಹ್ಮಣ್ಯ ಸ್ವಾಮಿ, ಗಣೇಶ ಸೇರಿದಂತೆ ಇನ್ನೂ ಹಲವು ದೇವರ ಮೂರ್ತಿಗಳಿವೆ. ನವಿಲು, ನರಿ, ಮೊದಲಾದ ಪಕ್ಷಿ ಪ್ರಾಣಿ ಗಳ ಮೂರ್ತಿಗಳೂ ಇವೆ. ಎಲ್ಲವೂ ಮಣ್ಣಿನಿಂದ ಮಾಡಲ್ಪಟ್ಟವು. ದೇವಿಯ ಕಾಲಿನ ಬುಡದಲ್ಲಿ ಕಂಚಿನಿಂದ ಎರಕ ಹೊಯ್ದ ಶ್ರೀರಾಜರಾಜೇಶ್ವರಿ, ಭದ್ರ ಕಾಳಿ, ಗಣಪತಿ, ಸುಬ್ರಹ್ಮಣ್ಯ ಮತ್ತು ಶಿವನ ವಿಗ್ರಹಗಳಿವೆ. ಮೃಣ್ಮಯ ವಿಗ್ರಹಗಳಿಗೆ ಅಭಿಷೇಕ ಇಲ್ಲ ದಿರುವುದರಿಂದ, ಕಂಚಿನ ಈ ಪಂಚಮೂರ್ತಿಗಳಿಗೆ ಅಭಿಷೇಕ ನಡೆಯುತ್ತದೆ. ಶ್ರೀರಾಜರಾಜೇಶ್ವರಿಗೆ ಅಭಿಷೇಕ ಇಲ್ಲ, ಬರೇ ಪ್ರೋಕ್ಷಣೆ ಮಾತ್ರ.



''**ಪೊಳಲಿ ಚೆಂಡು**''

ಸಾಮಾನ್ಯವಾಗಿ ದೇವರ ಮೂರ್ತಿ ಅಥವಾ ಚಿತ್ರಗಳಲ್ಲಿ ಅನೇಕ ಬಣ್ಣಗಳಿರುವುದನ್ನು ಮತ್ತು ಎರಡಕ್ಕಿಂತ ಹೆಚ್ಚು ಕೈಗಳಿರುವುದನ್ನು ಕಾಣಬಹುದು. ನಾಲ್ಕು ಅಥವಾ ಎಂಟು ಕೈಗಳು ಸಾಮಾನ್ಯ. ಆದರೆ ಪೊಳಲಿಯ ಎಲ್ಲಾ ದೇವದೇವಿಯರಿಗೆ ಒಂದೇ ರಕ್ತವರ್ಣ ಮತ್ತು ಎಲ್ಲರಿಗೂ ಎರಡೇ ಕೈಗಳು. ಶ್ರೀರಾಜರಾಜೇಶ್ವರಿಯ ಎಡಗೈ ವರ ಮುದ್ರೆಯಿಂದಲೂ, ಬಲಗೈ ಅಭಯ ಮುದ್ರೆಯಿಂದಲೂ ಇದ್ದು, ಸಮದೃಷ್ಟಿಯುಳ್ಳದ್ದಾಗಿದೆ. ಆಗಮಶಾಸ್ತ್ರದ ಪ್ರಕಾರ ೩೨ ಲಕ್ಷಣ ಗಳಿಂದ ಕೂಡಿದ ಮೃಣ್ಮಯಿ ಶುಭದಾ ಮೂರ್ತಿಯು, ನಾವು ಯಾವ ದಿಕ್ಕಿನಲ್ಲಿ ನಿಂತು ನೋಡಿದರೂ ಆ ಮೂರ್ತಿ ನಮ್ಮನ್ನೇ ನೊಡುತ್ತಾ ತನ್ನೆಡೆಗೆ ಆಕರ್ಷಿಸುವಂತಿದೆ.



**ಪೊಳಲಿ ರಥೋತ್ಸವ**

ಆರಂಭದಲ್ಲಿ ಧ್ವಜಸ್ತಂಭದಲ್ಲಿ ಪುರುಷಾಕಾರದ ಧ್ವಜವಿತ್ತು. ಅದು ಜೀರ್ಣವಾದ ಮೇಲೆ ಮಯೂರದ ಚಿತ್ರವಿರುವ ಬಿಳಿಯ ವಸ್ತ್ರ ಧ್ವಜವಾಯಿತು. ೧೯೫೮ ರಲ್ಲಿ ನೂತನ ಧ್ವಜಸ್ತಂಭಕ್ಕೆ ಕಂಚಿನ ಹೊದಿಕೆ ಮಾಡಿ ಬೆಳ್ಳಿಯ ಧ್ವಜವನ್ನು ನಿರ್ಮಿಸಲಾಯಿತು.

ಕರುಣಾಮೃತ ಸಾಗರೆಯಾಗಿ, ಭಕ್ತವತ್ಸಲೆಯಾಗಿ, ಭಯ ಹಾರಿಣಿಯಾಗಿ, ಜಗನ್ಮಾತೆಯಾಗಿರುವ ಶ್ರೀರಾಜರಾಜೇಶ್ವರಿ ದೇವಿಯು ಸರ್ವರಿಗೂ ಸನ್ಮಂಗಳವನ್ನುಂಟುಮಾಡಲಿ.

*ಆಕರಗಳು:*


*೧. **ಶ್ರೀಕ್ಷೇತ್ರ ಪೊಳಲಿ,** ಪೊಳಲಿ ಶಂಕರನಾರಾಯಣ ಶಾಸ್ತ್ರಿ*

*೨. ಏರ್ಯ ಲಕ್ಷ್ಮೀನಾರಾಯಣ ಆಳ್ವರ ಲೇಖನ* ❁

# ಸೇವೆಯ ದಿಗಂತದತ್ತ
# ಶ್ರೀಶಾರದಾ ಮಠದ ಮತ್ತೊಂದು ಹೆಜ್ಜೆ

ಸ್ವರ್ಣಗೌರಿ

ಭಾರತೀಯ ಸ್ತ್ರೀಯರ ಏಳಿಗೆಗಾಗಿ, ಅವರ ಶ್ರೇಯಸ್ಸಿಗಾಗಿ ಅರುಣಾಚಲ ಪ್ರದೇಶದ ದಿರಾಂಗ್‌ನಲ್ಲಿ ಶ್ರೀಶಾರದಾ ಮಠವು ನಡೆಸುತ್ತಿರುವ ಸೇವಾಕಾರ್ಯದ ಸಂಕ್ಷಿಪ್ತ ಪರಿಚಯ ಇಲ್ಲಿದೆ. ಲೇಖಕಿ ಮೈಸೂರು ಶ್ರೀರಾಮಕೃಷ್ಣ ಮಠದ ಭಕ್ತರು. ಅವರು ಅನೇಕ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.

ಪರಿವ್ರಾಜಕರಾಗಿ ದೇಶದ ಉದ್ದಗಲಕ್ಕೂ ಸಂಚರಿಸಿದ ಸ್ವಾಮಿ ವಿವೇಕಾನಂದರು ಹೆಣ್ಣು ಮಕ್ಕಳ ಪರಿಸ್ಥಿತಿಯನ್ನು ನೋಡಿ ಮಮ್ಮಲ ಮರುಗಿದರು. ಸ್ತ್ರೀಯರಿಗೆ ಶಿಕ್ಷಣ ನೀಡಿದರೆ ಅವರು ತಮ್ಮ ಸಮಸ್ಯೆಗಳನ್ನು ತಾವೇ ಪರಿಹರಿಸಿಕೊಳ್ಳುವರು ಎಂದು ಮನಗಂಡ ಸ್ವಾಮೀಜಿ, ''ಭಾರತೀಯ ನಾರಿಯರಿಗೆ ನಾನಾ ಬಗೆಯ ಜಟಿಲ ಸಮಸ್ಯೆಗಳಿವೆ, ಆದರೆ 'ವಿದ್ಯಾಭ್ಯಾಸ' ಎಂಬ ಅಮೋಘವಾದ ಮಂತ್ರದಿಂದ ನಿವಾರಿಸಲಾಗದ ಸಮಸ್ಯೆ ಯಾವುದೂ ಇಲ್ಲ'' ಎಂದು ಘೋಷಿಸಿದರು. ಸ್ತ್ರೀಯರ ಉದ್ಧಾರದ ಬಗ್ಗೆ ಅವರು ಕಂಡ ಸ್ವಪ್ನದ ಸಾಕಾರಗೊಂಡಂತೆ ಶ್ರೀ ಶಾರದಾ ಮಠವು ಕ್ರಿ.ಶ. ೧೯೫೪, ಡಿಸೆಂಬರ್‌ನಲ್ಲಿ ಜನ್ಮ ತಾಳಿತು. ಸ್ವಾಮೀಜಿಯವರ ದಿವ್ಯ ಸ್ವಪ್ನವನ್ನು ಈಡೇರಿಸುವಲ್ಲಿ ಶ್ರೀಶಾರದಾ ಮಠವು ನಡೆಸುತ್ತಿರುವ ಕಾರ್ಯ ಚಟುವಟಿಕೆ, ವಿಸ್ತರಣೆ, ಸಮಾಜಸೇವೆ – ವಿಶೇಷವಾಗಿ ಸ್ತ್ರೀಯರ ಸರ್ವತೋಮುಖ ಬೆಳವಣಿಗೆಯ ನಿಟ್ಟಿನಲ್ಲಿ ನಡೆದಿರುವ ಸಾಧನೆ ಆಶ್ಚರ್ಯಕರ. ಇದು ಎಲ್ಲ ಸ್ತ್ರೀಯರೂ ಹೆಮ್ಮೆಪಡುವ ವಿಷಯ ವಾಗಿದೆ. ಈ ಅರುವತ್ತು ವರ್ಷಗಳಲ್ಲಿ ದೇಶದಾದ್ಯಂತ ಮೂವತ್ತು ಶಾಖೆಗಳಾಗಿ ಕವಲೊಡೆದಿರುವ ಶ್ರೀಶಾರದಾ ಮಠದ ಸಾಧನೆ ಇತಿ ಹಾಸದ ಪುಟಗಳಲ್ಲಿ ಸುವರ್ಣಾಕ್ಷರದಲ್ಲಿ ಬರೆದಿಡಲು ಯೋಗ್ಯ ವೆಂದರೆ ತಪ್ಪಾಗದು. ಒಂದೊಂದು ಶಾಖೆಯೂ ಸಮಾಜಕ್ಕೆ ನೀಡು ತ್ತಿರುವ ಕೊಡುಗೆ ಅಪಾರ.

ಸ್ವಾಮೀಜಿಯ 'ಸ್ತ್ರೀ ಶಿಕ್ಷಣ'ದ ಆಲೋಚನೆಗಳ ಮೂರ್ತರೂಪ ವಾಗಿರುವ ಅರುಣಾಚಲ ಪ್ರದೇಶದಲ್ಲಿನ ದಿರಾಂಗ್‌ನಲ್ಲಿರುವ ಶ್ರೀಶಾರದಾ ಮಠದ ಶಾಖೆಗೆ ಭೇಟಿ ನೀಡುವ ಸುವರ್ಣಾವಕಾಶ ನನಗೆ ದೊರಕಿತು. ಅದು ಮೇ ತಿಂಗಳ ೨೦೧೬ರಲ್ಲಿ. ಕೇವಲ ಐದು ವರ್ಷಗಳಲ್ಲಿ ಈ ಶಾಖೆಯು ಸಾಧಿಸಿದ ಸಾಧನೆಯನ್ನು ಕಂಡು ನಿಬ್ಬೆರ ಗಾದ ನನ್ನ ಮನಸ್ಸಿನಲ್ಲಿ ಹಲವು ದಿನಗಳ ಕಾಲ ಸ್ವಾಮೀಜಿಯವರ ಈ ನುಡಿಗಳೇ ಪ್ರತಿಧ್ವನಿಸುದ್ದವು: ''ನಮಗೆ ಬೇಕಾಗಿರುವುದು ಸಂಘ ಸಂಚಾಲನ ಶಕ್ತಿ. ತಿಳಿಯಿತೆ?.. ಕೆಲವು ಶಿಷ್ಯರು ನಮಗೆ ಬೇಕಾಗಿದ್ದಾರೆ. ಅವರು ಬೆಂಕಿಯ ಚೂರಿನಂತಹವರಾಗಬೇಕು, ಗೊತ್ತಾಯಿತೆ? ಬುದ್ಧಿವಂತರಾಗಿರಬೇಕು. ಮೃತ್ಯುವಿನ ದಾಡೆಯೊಳಗೆ ಪ್ರವೇಶ ಮಾಡುವುದಕ್ಕೂ ಸಿದ್ಧರಾಗಿರಬೇಕು. ಸಾಗರವನ್ನು ಕೂಡ ಈಜುವ ಸಾಹಸವಿರಬೇಕು.. ಅಂತಹ ನೂರಾರು ಮಂದಿ ಗಂಡಸರೂ ಹೆಂಗ ಸರೂ ಬೇಕಾಗಿದ್ದಾರೆ..'' *(ಕೃತಿಶ್ರೇಣಿ, ಸಂ.೪, ಪು.೨೨೧)*



ಕೋನ್ಸಾದಲ್ಲಿರುವ ದೇವಾಲಯ

''ನಮಗೆ ಎರಡು ಸಾವಿರ ಅಲ್ಲ, ಹತ್ತು ಅಲ್ಲ, ಇಪ್ಪತ್ತು ಸಾವಿರ ಸಂನ್ಯಾಸಿಗಳು ಬೇಕು. ಸ್ತ್ರೀಯರು ಮತ್ತು ಪುರುಷರು ಇರಬೇಕು. ನಮಗೆ ಸ್ತ್ರೀಯರೂ ಪುರುಷರೂ ಇಬ್ಬರೂ ಬೇಕಾಗಿದ್ದಾರೆ.. ಸಾವಿ ರಾರು ಪುರುಷರು ಮತ್ತು ಸ್ತ್ರೀಯರು ಕಾಡ್ಗಿಚ್ಚಿನಂತೆ ಹಿಮಾಲಯ ದಿಂದ ಕನ್ಯಾಕುಮಾರಿಯವರೆಗೂ, ದಕ್ಷಿಣದಿಂದ ಉತ್ತರಧ್ರುವದ ವರೆಗೂ ಪ್ರಪಂಚದ ಎಲ್ಲಾ ಕಡೆಗಳಲ್ಲೂ ಹರಡಬೇಕಾಗಿದೆ. ಸೋಮಾರಿತನದಿಂದ ಪಾರಾಗಿ. ಹಬ್ಬಿ! ಹಬ್ಬಿ! ಬೆಂಕಿಯಂತೆ ಎಲ್ಲಾ ಸ್ಥಳಗಳಿಗೂ ಹೋಗಿ…'' *(ಕೃತಿಶ್ರೇಣಿ, ಸಂ.೫, ಪು.೮-೯)*

ಇದು ಋಷಿವಾಣಿ; ಸ್ವಾಮಿ ವಿವೇಕಾನಂದರ ವಾಣಿ. ಋಷಿಯ ವಾಣಿ ಎಂದಿಗೂ ಸುಳ್ಳಾಗದು. 'ನನ್ನ ಬಾಯಿಂದ ಹೊರಟ ಮಾತು ಆನೆಯ ದಂತದಂತೆ, ಒಮ್ಮೆ ಹೊರಬಂದರೆ ಮತ್ತೆ ಒಳಹೋಗದು' ಎಂದು ಸ್ವಾಮೀಜಿಯೇ ನುಡಿದಿದ್ದರು. 'ಅವರ ನುಡಿಗಳಲ್ಲಿನ ಒಂದೇ ಒಂದು ಅರ್ಧವಿರಾಮವನ್ನೂ ತೆಗೆದುಹಾಕುವಂತಿಲ್ಲ' ಎಂದಿದ್ದಾರೆ ಸ್ವಾಮೀಜಿಯವರ ಶಿಷ್ಯರಾದ ಸ್ವಾಮಿ ಆತ್ಮಾನಂದರು. ಸ್ವಾಮೀಜಿಯವರ ಮಾತುಗಳನ್ನು ಸಾಕಾರಗೊಳಿಸುವಂತೆ, ಭಾರ ತದ ಈಶಾನ್ಯ ಭಾಗದ ಗುಡ್ಡಗಾಡು ಪ್ರಾಂತದಲ್ಲಿ ಸ್ತ್ರೀ ಶಿಕ್ಷಣ ಹಾಗೂ ಸಾಮಾಜಿಕ ಅಭಿವೃದ್ಧಿಯ ಕಾರ್ಯ ಶ್ರೀಶಾರದಾ ಮಠದ ಮೂಲಕ ಮುಂದುವರಿದಿದೆ.



ದಿರಾಂಗ್‌ನಲ್ಲಿರುವ ವಸತಿ ಶಾಲೆ

ಅರುಣಾಚಲ ಪ್ರದೇಶದಲ್ಲಿನ ತಿರಾಪ್ ಜಿಲ್ಲೆಯ ಕೋನ್ಸ ಎಂಬ ಪ್ರದೇಶದಲ್ಲಿ ಶ್ರೀಶಾರದಾ ಮಠದ ಪ್ರಥಮ ಶಾಖೆಯು ಪ್ರಾರಂಭ ವಾಯಿತು. ಕಳೆದ ೩೮ ವರ್ಷಗಳಿಂದ ಅದು ಗುಡ್ಡಗಾಡಿನ ಹೆಣ್ಣು ಮಕ್ಕಳಿಗೆ ಶಿಕ್ಷಣ ಕ್ಷೇತ್ರದಲ್ಲಿ ನೀಡುತ್ತಿರುವ ಅಪಾರ ಸೇವೆಯ ಉನ್ನತಿ ಯನ್ನು ಕಂಡು ಮೆಚ್ಚಿದ ವೆಸ್ಟ್ ಕಾಮಿಂಗ್ ಜಿಲ್ಲೆಯ ದಿರಾಂಗ್ ಪ್ರದೇಶದ ಜನರು, ಎಂ.ಎಲ್.ಎ. ಹಾಗೂ ಇತರ ಮಂತ್ರಿಗಳು ತಮ್ಮ ಪ್ರದೇಶದಲ್ಲೂ ಹೆಣ್ಣುಮಕ್ಕಳಿಗೆ ಅಂತಹುದೇ ಶಿಕ್ಷಣ ನೀಡಿ ರೆಂದು ಸವಿನಯದಿಂದ ಪ್ರಾರ್ಥನೆ ಸಲ್ಲಿಸಿದರು. ಅವರ ಒತ್ತಾಯಕ್ಕೆ ಮಣಿದ ಶ್ರೀಶಾರದಾ ಮಠವು ಕ್ರಿ.ಶ ೨೦೧೧ರ ಜುಲೈ ೧೦, ಬುದ್ಧ ಪೂರ್ಣಿಮೆಯಂದು 'ಶ್ರೀರಾಮಕೃಷ್ಣ ಶಾರದಾ ಮಿಷನ್' ಅನ್ನು ಆರಂಭಿಸಿತು. ಫೆಬ್ರವರಿ ೨೦೦೮ರಲ್ಲಿ ಅರುಣಾಚಲ ಪ್ರದೇಶದ ಮುಖ್ಯಮಂತ್ರಿಗಳೇ ಈ ಯೋಜನೆಯನ್ನು ಉದ್ಘಾಟಿಸಿ, ದಿರಾಂಗ್ ನಿಂದ ೧೫ ಕಿ.ಮಿ. ದೂರದಲ್ಲಿ ಕ್ಯಾಮಣಿ (Kyamani) ನದೀ ದಡದಲ್ಲಿ ಹತ್ತು ಎಕರೆ ಜಮೀನನ್ನು ನೀಡಿದರು. ಕೇವಲ ೧೪ ರಿಂದ ೧೫ ಲಕ್ಷ ಜನಸಂಖ್ಯೆಯಿಂದ ಕೂಡಿದ ಈ ರಾಜ್ಯದಲ್ಲಿ ಕಣ್ಣು ಹಾಯಿಸಿದಲ್ಲೆಲ್ಲಾ ಹಚ್ಚಹಸಿರಿನಿಂದ ಕೂಡಿದ ಅತ್ಯುನ್ನತ ಗಿರಿ ಶಿಖರ ಗಳೇ ತುಂಬಿವೆ. ಸುತ್ತಲೂ ಶಿವಾಲಿಕ್ ಹಿಮಾಲಯ ಪರ್ವತ ಶ್ರೇಣಿ, ನದೀತೀರದಲ್ಲಿನ ಅತ್ಯಂತ ಮನೋಹರವೂ, ರಮಣೀಯವೂ ಆದ ಪ್ರದೇಶದಲ್ಲಿರುವ ಈ ಶಾಖೆಯು ಯಾರ ಮನಸ್ಸನ್ನಾದರೂ ಕ್ಷಣಾರ್ಧದಲ್ಲಿ ಅಪಹರಿಸಿಬಿಡುತ್ತದೆ. ಈ ಶಾಖೆಯನ್ನು ರಕ್ಷಿಸಲು ಪ್ರಕೃತಿಯೇ ಅಭೇದ್ಯವಾದ ಕೋಟೆಯನ್ನು ನಿರ್ಮಿಸಿದೆಯೇನೋ ಎಂಬಂತಿದೆ ಸುತ್ತಲೂ ಇರುವ ಪರ್ವತ ಶ್ರೇಣಿ. ಪ್ರಕೃತಿಯ ಸೊಬಗಿ ನೊಡನೆ ಹಿಮಾಲಯದ ಪವಿತ್ರತೆಯೂ ಸೇರಿ ಮೂಡುವ ಅದ್ಭುತ ವಾದ ಆಧ್ಯಾತ್ಮಿಕ ತರಂಗಗಳ ಕಂಪನವನ್ನು ಎಂತಹ ನಾಸ್ತಿಕನೂ ಅನುಭವಿಸಬಲ್ಲನು.

**ಜನಜೀವನ:** ೪೨೦ ಹಳ್ಳಿಗಳಿಂದ ಕೂಡಿದ ವೆಸ್ಟ್ ಕಾಮೆಂಗ್ ಜಿಲ್ಲೆಯಲ್ಲಿ ಹೆಚ್ಚಿನಾಂಶ ಜನರು ಮೋನ್ಪ (Monpa) ಪಂಗಡಕ್ಕೆ ಸೇರಿದವರು. ಬೆಟ್ಟಪ್ರದೇಶದಲ್ಲಿ ಅಲ್ಲಲ್ಲಿ ಇರುವ ೨೦ ರಿಂದ ೩೦ ಕುಟುಂಬಗಳು ಒಟ್ಟಾಗಿ ಸೇರಿ ಬಸ್ತಿ (ಹಳ್ಳಿ) ಎನಿಸಿಕೊಳ್ಳುತ್ತದೆ. 'ರಾಮಕೃಷ್ಣ ಶಾರದಾ ಮಿಷನ್' ಇಂತಹ ೪ ಬಸ್ತಿಗಳಿಂದ ಆವೃತ ವಾಗಿದೆ. ಅವುಗಳೇ ಕಾಸ್ಲೋ, ಲಾಚಾಂಗ್, ಶಂಗ್ತಿ ಹಾಗೂ ಪುದುಂಗ್. ಹೆಚ್ಚಿನ ಸೌಲಭ್ಯಗಳುಳ್ಳ ಬಾಮ್‌ಡೀಲಾ ದಿರಾಂಗ್ ಇತ್ಯಾದಿ ಪ್ರದೇಶಗಳು ಪಟ್ಟಣಗಳೆನಿಸಿವೆ. ಮೂಲತಃ ಕೃಷಿ ಉತ್ಪಾ ದನೆಗಳೇ ಪ್ರಧಾನವಾಗಿರುವ ರಾಜ್ಯವಿದು. ೪೫೦೦ ವೈವಿಧ್ಯದ ಹೂಗಳು, ೩೫ ವಿಧದ ಬಿದಿರು, ೫೦೦ ವಿಧದ ಆರ್ಕಿಡ್, ೧೨ ವನ್ಯ ಮೃಗಧಾಮಗಳು, ೨ ರಾಷ್ಟ್ರೀಯ ಉದ್ಯಾನಗಳುಳ್ಳ ಈ ರಾಜ್ಯವನ್ನು ಪ್ರಪಂಚದಲ್ಲಿನ ೧೨ ಅತ್ಯುತ್ತಮ ವೈವಿಧ್ಯತೆಗಳುಳ್ಳ 'Hot Spots' ಗಳಲ್ಲಿ ಒಂದು ಎಂದು ಪರಿಗಣಿಸಲಾಗಿದೆ. ಸೇಬು, ಕಿವಿ (ಏತಿ), ಕಿತ್ತಳೆ ಮುಂತಾದ ಹಣ್ಣುಗಳಿಂದ ಕೂಡಿದ ಸಮೃದ್ಧ ಮರಗಳ ದೃಶ್ಯವೇ ಒಂದು ವಿಶೇಷ ಸೊಬಗು. ಪ್ರಾತಃಕಾಲ ನಾಲ್ಕು ಗಂಟೆಗೇ ಹಾಡಹಗಲಿನಂತೆ ಕಾಣುವ ಈ ರಾಜ್ಯಕ್ಕೆ 'Hand of Down lit Mountains' ಎಂದೇ ಹೆಸರು. ಪರಶುರಾಮ ಋಷಿಯು ತನ್ನ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡ, ವ್ಯಾಸರು ಧ್ಯಾನ ಮಾಡಿದ, ರಾಜ ಭಿಸ್ಮಾಕನು ರಾಜ್ಯಭಾರ ಮಾಡಿದ ಹಾಗೂ ಶ್ರೀಕೃಷ್ಣನು ರುಕ್ಮಿಣೀದೇವಿಯನ್ನು ವರಿಸಿದ ಸ್ಥಳವೇ ಇದೆಂದು ಇಲ್ಲಿನ ದಂತ ಕತೆಗಳು ವರ್ಣಿಸುತ್ತವೆ.

ಈ ರಾಜ್ಯದಲ್ಲಿನ ವಿಶೇಷತೆ ಎಂದರೆ ಎಲ್ಲಾ ಕ್ಷೇತ್ರಗಳಲ್ಲೂ ಸ್ತ್ರೀಯರೇ ಮುಂದಾಳುಗಳು. ಕುಟುಂಬ ನಿರ್ವಹಣೆಯಲ್ಲಂತೂ ಅವರದೇ ಮೇಲುಗೈ. ರೂಪಿನಲ್ಲೂ 'ಸುಂದರಿ'ಯರ ಗುಂಪಿಗೆ ಸೇರಿಸಬಹುದಾದ ಈ ಸ್ತ್ರೀಯರು ದೈಹಿಕವಾಗಿಯೂ ಸದೃಢರು, ಸಶಕ್ತರು. ಕುಟುಂಬದ ಕಾರ್ಯಭಾರ ನಿರ್ವಹಿಸುವುದು, ಹೊಲ ಉಳುವುದು, ಭೋಜನಗೃಹ ನಡೆಸುವುದು, ಇತ್ಯಾದಿಗಳಲ್ಲಿ ಸ್ತ್ರೀಯರದೇ ಪ್ರಧಾನಪಾತ್ರ. ಇಂತಹ ರಾಜ್ಯದಲ್ಲಿ 'ಶ್ರೀರಾಮಕೃಷ್ಣ ಶಾರದಾ ಮಿಷನ್' ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡುವ ಮೂಲಕ ಮಾಡುತ್ತಿರುವ ಈ ಸೇವೆಯು ಹೆಚ್ಚು ಅರ್ಥಪೂರ್ಣ ಎನಿಸುತ್ತ ದಲ್ಲವೆ? ಆಧುನಿಕ ನಾಗರಿಕತೆಯು ಇನ್ನೂ ಹೆಚ್ಚಾಗಿ ಕಾಲಿಡದ ಕಾರಣ ಸಮಾಜದ ಕಂಟಕಗಳಾದ ಆತ್ಮಹತ್ಯೆ, ಜೂಜು, ಕುಡಿತ, ಕಳ್ಳತನ, ಸುಲಿಗೆ ಇತ್ಯಾದಿಗಳು ಅತ್ಯಂತ ಕಡಿಮೆ ಅಥವಾ ವಿರಳ ಎಂದೇ ಹೇಳಬಹುದು. ಆದ್ದರಿಂದ ಜನರು ಮುಗ್ಧರೂ, ಧರ್ಮ ಭೀರುಗಳೂ ಆಗಿದ್ದಾರೆ.

ವರ್ಷವಿಡೀ ಚಳಿಯಿಂದ ಕೂಡಿದ ಈ ಪ್ರದೇಶದಲ್ಲಿ ಜನವರಿ–ಫೆಬ್ರವರಿ ತಿಂಗಳುಗಳಲ್ಲಿ ಶೀತ –೭೦ ಡಿಗ್ರಿಯವರೆಗೂ ಇಳಿಯು ತ್ತದೆ. ಆ ದಿನಗಳಲ್ಲಿ ಅಡಿಗೆಯ ಅನಿಲ ಘನವಾಗಿ ಸೌದೆ ಒಲೆ ಹತ್ತಿಸಿ ಬಿಸಿನೀರು ಮಾಡಿ, ಅನಿಲದ ಮೇಲೆ ಸುರಿದ ನಂತರವೇ ಕೆಲಸ ಪ್ರಾರಂಭ!!

**ಶಾಲೆ ಹಾಗೂ ವಿದ್ಯಾರ್ಥಿಗಳು:** ಕೇವಲ ೪೮ ಹೆಣ್ಣುಮಕ್ಕಳಿಂದ ಪ್ರಾರಂಭವಾದ ಈ ವಸತಿಶಾಲೆಯ ಮಕ್ಕಳ ಸಂಖ್ಯೆಯು ೫ ವರ್ಷಗಳಲ್ಲಿ ಐದು ಪಟ್ಟು ಅಂದರೆ ೨೫೦ ಮಕ್ಕಳ ವರೆಗೆ ಹೆಚ್ಚಿದೆ. ಅದಲ್ಲದೆ, ಈ ರಾಜ್ಯದ ಅತ್ಯಂತ ಶ್ರೇಷ್ಠ ಶಾಲೆ ಎಂಬ ಹೆಗ್ಗಳಿಕೆಗೂ ಪಾತ್ರವಾಗಿದೆ. ಆರಂಭದಲ್ಲಿ ಸರಕಾರದ ವತಿಯಿಂದ ಶಾಲಾ ಮತ್ತು ವಸತಿ ಕಟ್ಟಡಗಳ ನಿರ್ಮಾಣದಿಂದ ಪ್ರಾರಂಭಯಿತು. ಈಗ ಈ

ಶಾಖೆಯು ಎಲ್ಲಾ ರೀತಿಯಿಂದಲೂ ಸುಸಜ್ಜಿತವಾಗಿದೆ. ಬೃಹತ್ ಆಡಿಟೋರಿಯಂ, ಪ್ರಾರ್ಥನಾ ಮಂದಿರ, ಭೋಜನಶಾಲೆ, ಆಟದ ಮೈದಾನಗಳು, ಪುಸ್ತಕ ಭಂಡಾರ, ಸುಸಜ್ಜಿತ ಬೇಕರಿ, ವಿಶಾಲವಾದ ಅಡಿಗೆ ಮನೆ, ಹೊಲಿಗೆ ಕಸೂತಿ ತರಗತಿಗಳ ಕಟ್ಟಡ, ಅತಿಥಿಗೃಹ, ಸಂನ್ಯಾಸಿನಿಯರ ವಾಸಗೃಹ.. ಕೇವಲ ಐದು ವರ್ಷಗಳಲ್ಲಿ ಹತ್ತು ಹಲವಾರು ಕಟ್ಟಡಗಳು ತಲೆಯೆತ್ತಿ ನಿಂತಿವೆ.

೩ನೇ ತರಗತಿಯಿಂದ ೮ನೇ ತರಗತಿಯವರೆಗೆ ಓದುತ್ತಿರುವ ಹೆಣ್ಣುಮಕ್ಕಳಿಗೆ ಮುಂದಿನ ವರ್ಷ ೯ ಹಾಗೂ ೧೦ನೇ ತರಗತಿ ಮತ್ತು ಕಂಪ್ಯೂಟರ್ ತರಬೇತಿ ಕೇಂದ್ರ ಪ್ರಾರಂಭಿಸಲಿದ್ದೇವೆ ಎಂದು ಹರ್ಷೋಲ್ಲಾಸಗಳಿಂದ ನುಡಿಯುತ್ತಾರೆ ಕಾರ್ಯದರ್ಶಿಗಳಾದ ಪೂಜನೀಯ ಪ್ರವ್ರಾಜಿಕಾ ಅನಿಲಪ್ರಾಣಾರವರು. 'ಜನನಕ್ಕೆ ಮುಂಚಿನ ಪ್ರಭಾವವನ್ನು ನಿಯಂತ್ರಿಸಿ' ಎಂಬ ಶಾಸ್ತ್ರವಾಕ್ಯವನ್ನೂ, 'ಹುಟ್ಟುಗುಣ ಸುಟ್ಟರೂ ಹೋಗದು' ಎಂಬ ನಾಣ್ಣುಡಿಯನ್ನು ಮೀರಿ ನಿಂತಂತೆ ಇದೆ ಈ ಶಾಲೆಯ ಮಕ್ಕಳಿಗೆ ಕೊಡುತ್ತಿರುವ ಸಂಸ್ಕಾರ. ಆಧುನಿಕ ಮನೋವಿಜ್ಞಾನಿಗಳು, 'ಮಕ್ಕಳ ಭವಿಷ್ಯ ರೂಪಿಸುವುದು ಅವರ ಬಾಲ್ಯ ಜೀವನದ ಸಂಸ್ಕಾರಗಳು' ಎನ್ನುತ್ತಾರೆ. ದಿವ್ಯತ್ರಯರ ಸೇವೆಗೆ ಜೀವನವನ್ನೇ ಮುಡಿಪಾಗಿಟ್ಟು ಸುಶಿಕ್ಷಿತ, ಸಚ್ಚಾರಿತ್ರ್ಯಶೀಲರೂ, ಸುಸಂಸ್ಕಾರವಂತರೂ ಆದ ಸಂನ್ಯಾಸಿನಿ, ಬ್ರಹ್ಮಚಾರಿಣಿಯರ ತಂಡದ ತರಬೇತಿಯಿಂದಾಗಿ ಮಕ್ಕಳಲ್ಲಿ ಮೈಗೂಡಿದ ಸೌಜನ್ಯ, ವಿನಯವಂತಿಕೆ, ಒಳ್ಳೆಯ ನಡವಳಿಕೆ, ಮುಗ್ಧತೆ, ಚುರುಕು ಬುದ್ಧಿ – ಎಲ್ಲವೂ ಇವರನ್ನು ಒಂದು ವಿಶಿಷ್ಟ ಗುಂಪಿಗೆ ಸೇರಿಸಿದೆ ಎನ್ನುವುದರಲ್ಲಿ ಸಂಶಯವಿಲ್ಲ.

ಸದಾ ಸುಮಧುರ ಹಿನ್ನಲೆ ಸಂಗೀತದಲ್ಲಿ ಬೆಳೆಯುವ ಸಸ್ಯಗಳು ಹೆಚ್ಚು ಫಲ ನೀಡುತ್ತದೆ, ಗೋಮಾತೆಯು ಹೆಚ್ಚು ಹಾಲು ಕರೆಯುವಳು ಎಂಬುದು ವೈಜ್ಞಾನಿಕ ಆವಿಷ್ಕಾರ. ಅಂತೆಯೇ ಎಲ್ಲದಕ್ಕೂ ಹಿನ್ನೆಲೆ ಸಂಗೀತದಂತಿರುವ ಶಾಲೆಯ ಮುಂಭಾಗದಲ್ಲಿ ಹರಿಯುವ ನದಿಯ ಕಲರವವು ಮಕ್ಕಳನ್ನು ಹೆಚ್ಚು ಬುದ್ಧಿವಂತರನ್ನಾಗಿಸಿದಂತಿದೆ!

ಹಿಂದೂ ಸಂಸ್ಕೃತಿಯಲ್ಲಿ ದೇವದೇವತೆಯರ ವಾಸಸ್ಥಾನವಾದ ಹಿಮಾಲಯವು ಪವಿತ್ರತೆ, ಪೂಜ್ಯತೆಯ ದ್ಯೋತಕ. ಈ ಪರ್ವತಗಳ ಪ್ರಭಾವದಿಂದಲೋ ಏನೋ, ಆ ಪವಿತ್ರತೆಯು ಮಕ್ಕಳ ಮುಗ್ಧ ಮನಸ್ಸು ಹಾಗೂ ಮೊಗದ ಮೇಲೆಯೂ ಬೀರಿದಂತಿದೆ. ಶಾಲೆಯಲ್ಲಿ ತಾವು ಮಾಡಿದ ತಪ್ಪುಗಳನ್ನು, ತಾವೇ ಮುಂದಾಗಿ ಬಂದು ಒಪ್ಪಿಕೊಳ್ಳುವ ಪರಿಯನ್ನು ಕಂಡೇ ಆನಂದಪಡಬೇಕು. ಆ ನೈತಿಕ ಪ್ರಜ್ಞೆಯೊಡನೆ ಇತರರಿಗಾಗಿ ಕಳಕಳಿಯೂ ಸೇರಿದರೆ ಅವರ ಚಾರಿತ್ರ್ಯವು ಎಷ್ಟೊಂದು ಅಭಿವೃದ್ಧಿ ಹೊಂದಬಹುದು? ಮಕ್ಕಳು ಆಟದ ಮೈದಾನದಲ್ಲಿ ಕಬಡ್ಡಿ ಆಟ ಆಡುತ್ತಿರುವುದನ್ನು ವೀಕ್ಷಿಸುವುದರಲ್ಲಿ ಮೈಮರೆತ ನನಗೆ ತುಂತುರು ಮಳೆ ಹನಿಯಲು ಪ್ರಾರಂಭಿಸಿದ್ದು ಅರಿವಿಗೆ ಬರುವಷ್ಟರಲ್ಲೇ ಮಕ್ಕಳು ಓಡಿಹೋಗಿ ಕೊಡೆ ತಂದು, ನನಗೆ ಹಿಡಿದು ನಿಂತಿದ್ದಾರೆ!



ದಿರಾಂಗ್‌ನಲ್ಲಿ ಸೇವಾಕೇಂದ್ರಗಳು..

ಕೇಂದ್ರ ಹಾಗೂ ರಾಜ್ಯಸರ್ಕಾರಗಳ ಆರ್ಥಿಕ ಸಹಾಯ ಹಸ್ತವಲ್ಲದೆ ಕೆಲವು ಸಂಘ ಸಂಸ್ಥೆಗಳೂ ಈ ಸೇವೆಯಲ್ಲಿ ಟೊಂಕಕಟ್ಟಿ ನಿಂತಿವೆ. ICAR ನ ಶಾಖೆಯಾದ National Research Centre on Yak ನ ವಿಜ್ಞಾನಿಗಳ ಬೆಂಬಲ, ಆರ್ಥಿಕ ಸಹಾಯ, ಪ್ರೋತ್ಸಾಹ ಅಪರಿಮಿತ. ಇವರು ಪ್ರತಿವರ್ಷ ವಿದ್ಯಾರ್ಥಿಗಳಿಗಾಗಿ ರಾಜ್ಯಮಟ್ಟದಲ್ಲಿ ನಡೆಸುವ ರಾಷ್ಟ್ರೀಯ ವೈಜ್ಞಾನಿಕ ದಿನಾಚರಣೆ, ಕ್ರೀಡಾ ದಿನಾಚರಣೆ, ಚರ್ಚಾಸ್ಪರ್ಧೆ ಮುಂತಾದ ಎಲ್ಲಾ ಸ್ಪರ್ಧೆಗಳಲ್ಲೂ ಇತರ ಶಾಲೆಯ ಮಕ್ಕಳಿಗಿಂತ 'ಶ್ರೀರಾಮಕೃಷ್ಣ ಶಾರದಾ ಮಿಷನ್' ಶಾಲೆಯ ಮಕ್ಕಳಿಗೇ ಬಹುಮಾನಗಳು ಸಿಂಹಪಾಲು. 'Best Student Rolling Shield' ಮೂರು ವರ್ಷಗಳಿಂದ ಈ ಶಾಲೆಯ ವಿದ್ಯಾರ್ಥಿಗಳಿಗೇ ಮೀಸಲಾಗಿದೆ. ಬರವಣಿಗೆಯನ್ನು ಅಂದಗೊಳಿಸಲು ೩ನೇ ತರಗತಿಯಿಂದಲೇ ತರಬೇತಿ ನೀಡಲಾಗುತ್ತದೆ. ಪರಿಣಾಮ, ಶಾಲೆಯಲ್ಲಿನ ನಾಮಫಲಕವಾಗಲಿ, ಸಣ್ಣ ರಿಜಿಸ್ಟರ್ ಮೇಲಿನ ಲೇಬಲ್ ಆಗಲಿ ಮಕ್ಕಳಲ್ಲಿನ ಸೃಜನಾತ್ಮಕ ಪ್ರತಿಭೆಯನ್ನು ವ್ಯಕ್ತಗೊಳಿಸುತ್ತದೆ. ಪ್ರಕೃತಿಯ ಸೊಬಗನ್ನು ಬಣ್ಣಬಣ್ಣವಾಗಿ ಬಿಡಿಸುವ ಅಂದವಾದ ಗ್ರೀಟಿಂಗ್ ಕಾರ್ಡ್‌ಗಳು ಕಣ್ಣಿಗೆ ಹಬ್ಬ.

''ವಿದ್ಯಾಭ್ಯಾಸದ ಗುರಿಯೇ ಜ್ಞಾನದಾಹ'' ಎಂಬ ವಿವೇಕವಾಣಿಯ ಜ್ವಲಂತ ಉದಾಹರಣೆ ಈ ಮಕ್ಕಳು. ಇತರ ದೇಶಗಳ ಬಗ್ಗೆ ತಿಳಿಯಲು ಕುತೂಹಲ, ಉತ್ಸಾಹ ಅಪರಿಮಿತ. ಮೈಸೂರಿನ ಬಗ್ಗೆ ಎಷ್ಟು ಕೇಳಿದರೂ ಕುತೂಹಲ ತಣಿಯದು. ನೃತ್ಯವಂತೂ ಮಕ್ಕಳ ಅಚ್ಚುಮೆಚ್ಚಿನ ಕಲೆ. ಭರತನಾಟ್ಯ ಕಲಿಯಲು ಅವರಲ್ಲಿ ಚಿಮ್ಮುತ್ತಿದ್ದ ಉತ್ಸಾಹ ಕಂಡು, 'ಅಯ್ಯೋ! ನಾನೂ ಭರತನಾಟ್ಯ ಕಲಿತಿದ್ದರೆ!... ' ಎಂಬ ಸಣ್ಣ ವ್ಯಥೆಯ ಧ್ವನಿಯನ್ನು ನನ್ನಲ್ಲಿ ಗುರುತಿಸಿದೆ.

ಒಂದು ಮಗುವಿನ ವಾರ್ಷಿಕ ಶುಲ್ಕ ರೂ. ೨೪,೦೦೦. ಇದು ಸಮವಸ್ತ್ರ, ಊಟ, ಪಾಠಗಳ ಶುಲ್ಕ ಎಲ್ಲವೂ ಸೇರಿ! ಶೇಕಡ ೨೫ ಸೀಟುಗಳು ಬಡಮಕ್ಕಳಿಗಾಗಿ – ಶುಲ್ಕರಹಿತ. ಮಕ್ಕಳಿಗೆ ಉಣಬಡಿಸುವುದನ್ನೇ ಸಂನ್ಯಾಸಿನಿ ವರ್ಗದವರೂ ಸೇವಿಸುವರು. ಚಳಿಗಾಲ



ಮಹಿಳೆಯರಿಗೆ ಶೈಕ್ಷಣಿಕ ಸೇವೆ

ದಲ್ಲಿ ಮಕ್ಕಳಿಗೆ ತಾಪಯಂತ್ರ (ಹೀಟರ್) ಒದಗಿಸಲಾರೆವೆಂದು ತಾವೂ ಉಪಯೋಗಿಸುವುದಿಲ್ಲ. 'ಆತ್ಮನೋ ಮೋಕ್ಷಾರ್ಥಂ ಜಗತ್ ಹಿತಾಯ ಚ.' ಎಲ್ಲರೂ ಹೀಗೆ ನಿರ್ವಂಚನೆಯಿಂದ ನಿಸ್ವಾರ್ಥಿಗಳಾಗುವುದಾದರೆ ಅದೆಂತಹ ಸುಂದರ ಪ್ರಪಂಚದ ಸೃಷ್ಟಿಯಾಗುವುದು! ಮನದಲ್ಲಿ ಮೂಡಿದ ಈ ಭಾವನೆಯೇ ಅದೆಷ್ಟೋ ಹೊತ್ತು ನನ್ನನ್ನು ಆನಂದದ ಕಡಲಲ್ಲಿ ಮುಳುಗಿಸಿಬಿಟ್ಟಿತು.

ಮಕ್ಕಳ ಸರ್ವೋತ್ತಮ ಬೆಳವಣಿಗೆಗೆಂದು ಹೊಲಿಗೆ, ಕಸೂತಿ, ಚಿತ್ರಕಲೆ, ನೇಯ್ಗೆ ಹೀಗೆ ವಿವಿಧ ಬಗೆಯ ಕಸಬುಗಳಲ್ಲಿ ತರಬೇತಿ ನೀಡಲಾಗುವುದು. 'ಚಿಕ್ಕ ಸಸಿಯು ಹೆಮ್ಮರವಾಗಲು ಬೇಲಿ ಅತ್ಯಗತ್ಯ' ಎಂಬ ಶ್ರೀರಾಮಕೃಷ್ಣರ ನುಡಿಯಂತೆ ಪ್ರಾತಃಕಾಲ ೪.೪೫ ಗಂಟೆಗೆ ಎದ್ದಾಗಿನಿಂದ ಹಿಡಿದು ರಾತ್ರಿ ೧೦ ಗಂಟೆಯವರೆಗೆ, ನಿದ್ರಾಮಾತೆಯ ತೋಳಿನಾಸರೆ ಪಡೆಯುವವರೆಗೂ ಮಕ್ಕಳೊಡನಿದ್ದು, ಹೆಜ್ಜೆ ಹೆಜ್ಜೆಗೂ ಅವರ ಚಾರಿತ್ರ್ಯವನ್ನು ರೂಪಿಸುವರು.

'ಆಧ್ಯಾತ್ಮಿಕತೆಯ ಬೆಲೆ ತೆತ್ತು ವಿಜ್ಞಾನ ಕಲಿಯಬಾರದೆಂದು' ಸ್ವಾಮೀಜಿ ಎಚ್ಚರಿಸಿದ್ದಾರೆ. ಪ್ರಾತಃಕಾಲದ ಆಹ್ನಿಕಾದಿಗಳ ನಂತರ ಪ್ರತಿದಿನವೂ ವೇದಪಠನೆ, ಪ್ರಾರ್ಥನೆ, ಗೀತಾಪಾಠ ಹಾಗೂ ಸಂಜೆ ಭಜನೆ, ಧ್ಯಾನ, ಆರಾತ್ರಿಕಗಳು ಮಕ್ಕಳ ಆಧ್ಯಾತ್ಮಿಕ ಬೆಳವಣಿಗೆಗೆ ಪೂರಕವಾಗಿವೆ. ಹಾಗೆಯೇ ಮಕ್ಕಳ ದೈಹಿಕ ದೃಢತೆಗಾಗಿ ಜಾಗಿಂಗ್, ಯೋಗಾಭ್ಯಾಸ, ತೋಟಗಾರಿಕೆ, ಆಟ ಮುಂತಾದವುಗಳಲ್ಲಿ ತೊಡಗಿಸುತ್ತಾರೆ. ಪ್ರಾರ್ಥನಾ ಮಂದಿರ, ಪಾಠಶಾಲೆ ಇವುಗಳನ್ನು ನಿರ್ಮಲಗೊಳಿಸುವುದು, ತಮ್ಮ ಬಟ್ಟೆಗಳನ್ನು ತಾವೇ ಸ್ವಚ್ಛಗೊಳಿಸುವುದು, ಇತ್ಯಾದಿಗಳ ಮೂಲಕ ಸ್ವಾವಲಂಬನೆಯ ತರಬೇತಿ ನೀಡಲಾಗುವುದು. ಮಕ್ಕಳಲ್ಲಿ ರಾಷ್ಟ್ರಪ್ರೇಮ ಉದಯಿಸಲೆಂದು ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯೋತ್ಸವ, ಉಪಾಧ್ಯಾಯರ ದಿನ, ರಾಷ್ಟ್ರೀಯ ಯುವ ದಿನಾಚರಣೆ, ಇನ್ನೂ ಅನೇಕ ರಾಷ್ಟ್ರ ನಾಯಕರ ಹುಟ್ಟುಹಬ್ಬಗಳನ್ನು ಅತ್ಯಂತ ವೈಭವೋಪೇತವಾಗಿ ಆಚರಿಸಲಾಗುವುದು. ಒಟ್ಟಿನಲ್ಲಿ ಸ್ವಾಮಿ ವಿವೇಕಾನಂದರ ಪುರುಷ ಸಿಂಹರ ನಿರ್ಮಾಣ, ಶೀಲಶಕ್ತಿಯ ವ್ಯಕ್ತತೆ, ರಾಷ್ಟ್ರ ನಿರ್ಮಾಣ – ಈ ಭಾವನೆಗಳ ಮೇಲೆ ಆಧಾರಿತವಾದ ಗುರುಕುಲ ದಂತಿದೆ ಈ ಶಾಲೆ.

'ಶ್ರೀರಾಮಕೃಷ್ಣ ಶಾರದಾ ಮಿಷನ್'ದ ಗುರಿಯು ಕೇವಲ ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡುವುದೇ ಅಲ್ಲದೆ, ಸಮಾಜದ ಇನ್ನಿತರ ಆವಶ್ಯಕತೆಗಳನ್ನು ಪೂರೈಸುವಲ್ಲಿಯೂ ತನ್ನದೇ ಆದ ರೀತಿಯಲ್ಲಿ ಪುಟ್ಟ ಹೆಜ್ಜೆಗಳನ್ನು ಇಡುತ್ತಿದೆ. ಸ್ವಾಮೀಜಿಯವರ ೧೫೦ನೇ ಜನ್ಮದಿನೋತ್ಸವದ ಅಂಗವಾಗಿ ಹತ್ತಿರದ ಕಾಸ್ಸೋ ಬಸ್ತಿಯಲ್ಲಿ ಮಿಷನ್ ೧೫೦ ಶೌಚಾಲಯಗಳನ್ನು ನಿರ್ಮಿಸಿದೆ.

ಈ ಎಲ್ಲ ಯಶಸ್ಸಿನ ಹಿಂದೆ ಮಠವಾಸಿನಿಯರ, ಇನ್ನಿತರ ಕೆಲಸಗಾರರ, ಸ್ವಯಂಸೇವಕರ ತ್ಯಾಗ, ಪರಿಶ್ರಮ ಎಷ್ಟಿರಬಹುದು ಎಂಬುದನ್ನು ಪ್ರತ್ಯಕ್ಷ ಕಂಡಲ್ಲದೆ ಊಹಿಸುವುದು ಅಸಾಧ್ಯ.

'ವಿದ್ಯೆ ಮತ್ತು ಶೀಲಸಂಪನ್ನರಾದ ಬ್ರಹ್ಮಚಾರಿಣಿಯರು ಶಿಕ್ಷಣದ ಕೆಲಸವನ್ನು ವಹಿಸಿಕೊಳ್ಳಬೇಕು. ಊರುಗಳಲ್ಲಿ ಮತ್ತು ಕೇಂದ್ರಗಳಲ್ಲಿ ವಿದ್ಯಾಭ್ಯಾಸ ಹರಡುವುದಕ್ಕೆ ಪ್ರಯತ್ನಿಸಬೇಕು' ಎಂಬ ಸ್ವಾಮಿ ವಿವೇಕಾನಂದರ ಈ ನುಡಿಗಳನ್ನು ಸಾಕಾರಗೊಳಿಸುವ ಈ ವಿರಾಟ್ ದಿವ್ಯ ಸೇವಾಕಾರ್ಯದಲ್ಲಿ ಭಾಗವಹಿಸಲು ಆಸಕ್ತಿಯುಳ್ಳ ಎಲ್ಲರನ್ನೂ ಶ್ರೀಶಾರದಾಮಠವು ಹಾರ್ದಿಕವಾಗಿ ಸ್ವಾಗತಿಸುತ್ತದೆ. ❁

## ಭಾರತೀಯ ನಾರಿ – ಸ್ವಾಮೀಜಿ ಕಂಡಂತೆ



''ಹಿಂದೂ ನಾರಿಯರು ಧಾರ್ಮಿಕ ಮತ್ತು ಆಧ್ಯಾತ್ಮಿಕ ಪ್ರವೃತ್ತಿಯವರು. ಬಹುಶಃ ಪ್ರಪಂಚದ ಇತರ ನಾರಿಯರಿಗಿಂತ ಹೆಚ್ಚು ಎಂದು ಬೇಕಾದರೆ ಹೇಳಬಹುದು. ನಾವು ಈ ಪವಿತ್ರ ಭಾವನೆಯನ್ನು ರಕ್ಷಿಸಿಕೊಂಡು ನಮ್ಮ ಸ್ತ್ರೀಯರ ಬುದ್ಧಿಯ ಬೆಳವಣಿಗೆಗೆ ಅವಕಾಶ ಕೊಟ್ಟರೆ ಭಾರತದ ಭವಿಷ್ಯ ನಾರಿಯು ಇಡೀ ವಿಶ್ವಕ್ಕೇ ಆದರ್ಶವಾಗುವಳು.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೭, ಪು.೩೫೭)*

''ಸ್ತ್ರೀ ವಿದ್ಯಾಭ್ಯಾಸದಲ್ಲಿ ಧರ್ಮವೇ ಅದರ ಕೇಂದ್ರವಾಗಿರಬೇಕು. ಧಾರ್ಮಿಕ ಶಿಕ್ಷಣ ಶೀಲ ನಿರ್ಮಾಣ, ಬ್ರಹ್ಮಚರ್ಯ, ವ್ರತಾಚರಣೆ ಇವುಗಳಿಗೂ ಗೌರವ ಕೊಡಬೇಕು.'' *(ಕೃತಿಶ್ರೇಣಿ, ಸಂ.೮, ಪು.೨೧೮)*

''ಆದರ್ಶ ನಾರಿಯರ ಚರಿತ್ರೆಗಳನ್ನು ವಿದ್ಯಾರ್ಥಿನಿಯರ ಮುಂದೆ ಸರ್ವದಾ ಇಟ್ಟು ಉಚ್ಚ ತ್ಯಾಗರೂಪವಾದ ವ್ರತದಲ್ಲಿ ಅವರಿಗೆ ಅನುರಾಗ ಹುಟ್ಟುವಂತೆ ಮಾಡಬೇಕು. ಸೀತೆ, ಸಾವಿತ್ರಿ, ದಮಯಂತೆ, ಲೀಲಾವತಿ, ಖನಾ, ಮೀರಾ —ಇವರ ಜೀವನ ಚರಿತ್ರೆಗಳನ್ನು ಹೆಂಗಸರಿಗೆ ತಿಳಿಯಪಡಿಸಿ ತಮ್ಮ ಜೀವನಗಳನ್ನೂ ಹೀಗೆಯೇ ನಡೆಸಿಕೊಂಡು ಬರಬೇಕೆಂದು ಹೇಳಬೇಕು.''

*(ಕೃತಿಶ್ರೇಣಿ, ಸಂ.೮, ಪು.೬೦)*

# ನವದುರ್ಗೆಯರು

ಡಾ. ವಿ. ಶ್ರೀಮತಿ

ನವರಾತ್ರಿ ಉತ್ಸವದಲ್ಲಿ ಪೂಜಿಸಲ್ಪಡುವ ಶ್ರೀದುರ್ಗೆಯ ಒಂಬತ್ತು ಬಗೆಯ ಆವಿರ್ಭಾವದ ಹಿನ್ನೆಲೆಯನ್ನು ಅರಿತುಕೊಂಡು ಆರಾಧಿಸಿದಾಗಲೇ ಭಕ್ತನ ಉಪಾಸನೆಯು ಫಲದಾಯಕವಾಗುವುದು. ಶಾಸ್ತ್ರ ಹಾಗೂ ಪರಂಪರೆಯ ಆಧಾರದಲ್ಲಿ ಇದನ್ನು ವಿವರಿಸಿರುವ ಲೇಖಕಿ ಮೈಸೂರಿನಲ್ಲಿ ಸಂಸ್ಕೃತ ಉಪನ್ಯಾಸಕಿಯಾಗಿದ್ದಾರೆ. ಸುಲಲಿತ ಶೈಲಿಯ ಲೇಖನಗಳಿಂದ ಕೂಡಿರುವ ಗ್ರಂಥಗಳನ್ನು ಅವರು ಪ್ರಕಟಿಸಿದ್ದಾರೆ.

**ಯಾ ದೇವೀ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥**

ಭಾರತದ ಪ್ರಸಿದ್ಧ ಉತ್ಸವ, ಆಚರಣೆಗಳಲ್ಲಿ ನವರಾತ್ರಿ ಅಥವಾ ದಸರಾ ಒಂದಾಗಿದೆ. ಬಂಗಾಳದಲ್ಲಿ ದುರ್ಗಾಪೂಜೆ, ಉತ್ತರಪ್ರದೇಶದಲ್ಲಿ ದಶಹರ, ಕರ್ನಾಟಕದಲ್ಲಿ ಶರನ್ನವರಾತ್ರಿ ಮುಂತಾಗಿ ಅನೇಕ ಹೆಸರುಗಳಿಂದ ಈ ಹಬ್ಬವನ್ನು ಆಚರಿಸಲಾಗುತ್ತದೆ. ಹೆಸರು ಏನಿದ್ದರೂ ಅರ್ಥ ಒಂದೇ – ದುಷ್ಟಶಕ್ತಿಯ ನಾಶ ಹಾಗೂ ಶಿಷ್ಟ ಶಕ್ತಿಯ ವಿಜೃಂಭಣೆ. ಆ ಚೈತನ್ಯಭರಿತ ಶಕ್ತಿಯನ್ನೇ ನಾವು ದೇವರು ಎಂದು ಪೂಜಿಸುವುದು. ಆ ದೈವವನ್ನು ಒಲಿಸಿಕೊಳ್ಳಲು, ಸಾಕ್ಷಾತ್ಕರಿಸಿಕೊಳ್ಳಲು ಹಲವು ಮಾರ್ಗಗಳಿವೆ: ಜಪ-ತಪ-ಧ್ಯಾನ-ಪೂಜೆ-ಸ್ತೋತ್ರ ಇತ್ಯಾದಿ. ಎಲ್ಲದರ ಉದ್ದೇಶ ಆ ಪರತತ್ತ್ವವನ್ನು ಹೊಂದುವುದು.

**'ಉಪಾಸಿಕಾನಾಂ ಕಾರ್ಯಾರ್ಥೇ ಬ್ರಹ್ಮಣೋ ರೂಪ ಕಲ್ಪ್ಯತೇ'** ಎಂಬಂತೆ ತನ್ನನ್ನು ಆರಾಧಿಸುವವರನ್ನು ರಕ್ಷಿಸುವುದಕ್ಕಾಗಿ, ಅವರ ಪ್ರಯೋಜನಕ್ಕಾಗಿ ಪರಬ್ರಹ್ಮವು ಅನೇಕ ರೂಪಗಳನ್ನು ತಾಳುತ್ತದೆ. ಭಕ್ತರು ಕಲ್ಪಿಸಿದ ರೂಪದಲ್ಲಿ ಪ್ರಕಟವಾಗಿ ಅವರನ್ನು ಅನುಗ್ರಹಿಸುವುದೇ ಪರತತ್ತ್ವ ಅಥವಾ ಪರಬ್ರಹ್ಮನ ಕಾರ್ಯ. ಅಂತೆಯೇ ಪರಬ್ರಹ್ಮಸ್ವರೂಪಿಣಿಯಾದ ಶ್ರೀಮಾತೆಯು ಸೃಷ್ಟಿ-ಸ್ಥಿತಿ-ಲಯ ಕಾರ್ಯಗಳಿಗಾಗಿ, ದುಷ್ಟ ನಿಗ್ರಹ – ಶಿಷ್ಟ ರಕ್ಷಣೆಗಾಗಿ ಶ್ರೀಲಕ್ಷ್ಮೀ, ಶ್ರೀ ಸರಸ್ವತೀ, ಶ್ರೀಪಾರ್ವತೀ, ಶ್ರೀಗಾಯತ್ರೀ, ಶ್ರೀಸಾವಿತ್ರೀ, ಶ್ರೀ ಲಲಿತಾ, ಶ್ರೀ ದುರ್ಗಾ ಮುಂತಾಗಿ ಅನೇಕ ಅವತಾರಗಳನ್ನೆತ್ತಿರುವಳು. ಎಲ್ಲಾ ಅವತಾರಗಳೂ ಆ ಪರಬ್ರಹ್ಮ ತತ್ತ್ವವೊಂದರಿಂದಲೇ ಆವಿರ್ಭವಿಸಿರುವುವು. ಹಾಗೂ ಎಲ್ಲ ತತ್ತ್ವಗಳೂ ಪರಬ್ರಹ್ಮ ತತ್ತ್ವವನ್ನೇ ಪ್ರತಿಪಾದನೆ ಮಾಡು ವುವು.

ಆ ತತ್ತ್ವದ ಒಂದು ಸಾಕಾರರೂಪವನ್ನೇ ದುರ್ಗಾದೇವಿ ಎಂದು ಕರೆಯಲಾಗಿದೆ. 'ದುರ್ಗ' ಎಂದರೆ ರಾಕ್ಷಸ, ಮಹಾವಿಘ್ನ, ಸಂಸಾರ ಬಂಧಕವಾದ ಕರ್ಮ, ದುಃಖ, ನರಕ, ಯಮದಂಡ, ಪುನರ್ಜನ್ಮ, ಮಹಾಭಯ, ದೀರ್ಘರೋಗ ಮುಂತಾಗಿ ಅನೇಕ ಅರ್ಥಗಳಿವೆ. 'ಆ' ಎಂದರೆ ಇವುಗಳನ್ನು ನಾಶಪಡಿಸುವವಳು. ಈ ಎಲ್ಲಾ ಅರಿಷ್ಟಗಳನ್ನೂ ನಾಶಪಡಿಸುವ ದೇವಿಯನ್ನು 'ದುರ್ಗಾ' ಎಂದು ಕರೆಯಲಾಗಿದೆ.

**'ದುರ್ಗೇತಿ ಸ್ಮೃತಿ ಮಾತ್ರೇಣ ಯಾತಿ ದುರ್ಗಂ ನೃಣಾಮಿಹ'.** ದುರ್ಗಿ ಎಂದು ಸ್ಮರಿಸಿದ ಮಾತ್ರದಿಂದಲೇ ಮನುಷ್ಯರ ದುರ್ಗಪ್ರಾಯವಾದ ಕಷ್ಟಗಳೆಲ್ಲವೂ ನಾಶವಾಗುವುವು. ದುರಿತಗಳನ್ನು ನಿವಾರಿಸಿ ಮುಕ್ತಿಪದವಿಯನ್ನು ನೀಡುವ ಒಂಬತ್ತು ವರ್ಷದ ಕನ್ಯೆಯನ್ನು **ದುರ್ಗಾ** ಎನ್ನಲಾಗಿದೆ.

**'ದುಷ್ಪ್ರವೇಶತಯಾ ದುರ್ಗಃ ಪಾಪಿಭಿಸ್ತು ಕದಾಚನ'** ಎಂದು ನಿರುಕ್ತದಲ್ಲಿ ಹೇಳಿರುವಂತೆ; ಅವಿದ್ಯೆ ಮೊದಲಾದ ಆವರಣಗಳಿಂದ ಕೂಡಿರುವ ಪಾಪಿಗಳಿಗೆ ಹೊಂದಲು ಅಸಾಧ್ಯವಾಗಿರುವುದು. ಅಂದರೆ ಎಲ್ಲಿಯವರೆಗೆ ನಾವು ಅಜ್ಞಾನವಶರಾಗಿರುತ್ತೇವೆಯೋ ಅಲ್ಲಿಯವರೆಗೂ ಆ ಮಾತೆಯ ಸತ್ಯಸ್ವರೂಪದ ಅರಿವು ಉಂಟಾಗಲು ಸಾಧ್ಯವಿಲ್ಲ. ಮಾರ್ಕಂಡೇಯ ಪುರಾಣದಲ್ಲಿ 'ದುರ್ಗಾ' ಎಂಬ ಹೆಸರಿನ ಉಲ್ಲೇಖವಿದೆ.

**ತತ್ರೈವ ಚ ವಧಿಷ್ಯಾಮಿ ದುರ್ಗಮಾಖ್ಯಂ ಮಹಾಸುರಮ್ ।**
**ದುರ್ಗಾದೇವೀತಿ ವಿಖ್ಯಾತಂ ತನ್ಮೇ ನಾಮ ಭವಿಷ್ಯತಿ ॥**

'ಅಲ್ಲಿ ದುರ್ಗನೆಂಬ ಮಹಾ ಅಸುರನನ್ನು ಸಂಹರಿಸುತ್ತೇನೆ. ಆದ್ದರಿಂದ ನಾನು **ದುರ್ಗಾದೇವಿ** ಎಂಬ ಹೆಸರಿನಿಂದ ಪ್ರಸಿದ್ಧಳಾಗುತ್ತೇನೆ' ಎಂಬುದಾಗಿ ಭಗವತಿಯೇ ನುಡಿದಿರುವಳು. ದುರ್ಗ ಎಂಬುವನು ರುರು ಎಂಬ ರಾಕ್ಷಸನ ಮಗ. ಈತನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ, ಪುರುಷರಿಂದ ತನಗೆ ಮರಣ ಉಂಟಾಗಬಾರದೆಂಬ ವರವನ್ನು ಪಡೆದಿದ್ದನು. ಅಹಂಕಾರದಿಂದ ಕೂಡಿ ಲೋಕಕಂಟಕನಾಗಿದ್ದನು. ಆಗ ದೇವತೆಗಳೆಲ್ಲರೂ ತಮ್ಮನ್ನು ರಕ್ಷಿಸಬೇಕೆಂದು ಬ್ರಹ್ಮನನ್ನು ಮೊರೆಹೊಕ್ಕರು. ಬ್ರಹ್ಮನು ಇದು ತನ್ನಿಂದ ಸಾಧ್ಯವಿಲ್ಲವೆಂದು ಶ್ರೀದೇವಿಯನ್ನು ಪ್ರಾರ್ಥಿಸಿದನು. ಬ್ರಹ್ಮನ ಕೋರಿಕೆಯಂತೆ ಶ್ರೀಮಾತೆಯು ಕಾಳರಾತ್ರಿಯ ಮೂಲಕ ದುರ್ಗನನ್ನು ತನ್ನಲ್ಲಿಗೆ ಬರಮಾಡಿಕೊಂಡು ಯುದ್ಧದಲ್ಲಿ ಆತನನ್ನು ಸಂಹರಿಸಿ ದೇವತೆಗಳ ಸಂಕಷ್ಟವನ್ನು ದೂರ ಮಾಡಿದಳು.

ತಮೋಗುಣಾಭಿಮಾನಿಯಾದ ಲಕ್ಷ್ಮಿಯ ರೂಪಾಂತರವನ್ನು 'ದುರ್ಗಾ' ಎನ್ನಲಾಗಿದೆ. ಈಕೆಯನ್ನೇ ಆದಿಶಕ್ತಿ ಎಂದು ಪೂಜಿಸಲಾಗುತ್ತದೆ.

ಅಜ್ಞಾತವಾಸಕ್ಕೆ ಹೊರಡುವಾಗ ಯುಧಿಷ್ಠಿರನು ದುರ್ಗಾದೇವಿಯನ್ನು ಸ್ತುತಿಸಿ ಬೇಡುವನು : **'ದುರ್ಗಾತ್ತಾರಯಸೇ ದುರ್ಗೇ**

**ತತ್ತ್ವಂ ದುರ್ಗಾ ಸ್ಮೃತಾ ಜನೈಃ ।**'– 'ಹೇ ದುರ್ಗೇ! ನೀನು ಅತಿ ಪ್ರಬಲವಾದ ದುಃಖದಿಂದ ನಿನ್ನ ಭಕ್ತರನ್ನು ಪಾರುಮಾಡುವ ಸಾಮರ್ಥ್ಯವನ್ನು ಹೊಂದಿರುವುದರಿಂದಲೇ, ನಿನ್ನನ್ನು ದುರ್ಗಾ ಎಂದು ಜನರು ಸ್ತುತಿಸುವರು.' ಯುಧಿಷ್ಠಿರನ ಭಕ್ತಿಗೆ ಪ್ರಸನ್ನಳಾದ ದೇವಿಯು, 'ಅಜ್ಞಾತವಾಸದ ಸಮಯದಲ್ಲಿ ಯಾರೂ ನಿಮ್ಮನ್ನು ಗುರುತಿಸುವುದಿಲ್ಲ' ಎಂದು ಅಭಯವನ್ನು ನೀಡಿ ಪಾಂಡವರನ್ನು ರಕ್ಷಿಸಿದಳು.

ಇಂದ್ರಾದಿ ದೇವತೆಗಳನ್ನು ಶತ್ರು ಸಂಕಟದಿಂದ ಪಾರುಮಾಡಿದ್ದರಿಂದ ದೇವಿಯು 'ದುರ್ಗಾ' ಎಂದು ಪ್ರಸಿದ್ಧಳಾಗಿರುವಳು ಎಂಬ ವರ್ಣನೆ *ದೇವೀಪುರಾಣ*ದಲ್ಲಿ ಕಂಡುಬರುತ್ತದೆ.

'ದುರ್ಗಾ ದುರ್ಗಾರ್ತಿನಾಶಿನೀ' ಎಂಬಂತೆ ಜೀವಿಗಳ ದುರ್ಗತಿ, ದುಃಖಗಳನ್ನು ನಾಶಪಡಿಸುವವಳು ದುರ್ಗಾದೇವಿ. ಕಾಶೀಕ್ಷೇತ್ರದಲ್ಲಿ ನೆಲೆಸಿರುವವಳು ಶ್ರೀದುರ್ಗಾದೇವಿ. ಈ ವಿಷಯವಾಗಿ *ದೇವೀ ಭಾಗವತ*ದಲ್ಲಿ ಈ ರೀತಿ ಉಲ್ಲೇಖವಿದೆ:

ಸೂರ್ಯವಂಶದ ಸುದರ್ಶನ ಎಂಬ ರಾಜಪುತ್ರನು ಬಾಲ್ಯದಲ್ಲಿಯೇ ತನ್ನ ತಂದೆಯನ್ನು ಕಳೆದುಕೊಂಡು, ಶತ್ರುಭಯದಿಂದಾಗಿ ತನ್ನ ತಾಯಿಯೊಡನೆ ಭಾರದ್ವಾಜ ಮುನಿಗಳ ಆಶ್ರಮದಲ್ಲಿ ಬೆಳೆಯುತ್ತಾನೆ. ಈತನು ದೇವಿಯ ಪರಮ ಭಕ್ತ. ಕಾಶೀರಾಜನಾದ ಸುಬಾಹುವು ತನ್ನ ಪುತ್ರಿಯಾದ ಶಶಿಕಲೆಯ ಸ್ವಯಂವರಕ್ಕಾಗಿ ಸಿದ್ಧತೆಯನ್ನು ನಡೆಸಿ, ಸಮಸ್ತ ರಾಜರನ್ನೂ ಆಹ್ವಾನಿಸಿರುತ್ತಾನೆ. ಆಗ ಜಗನ್ಮಾತೆಯು ಶಶಿಕಲೆಯ ಸ್ವಪ್ನದಲ್ಲಿ ದರ್ಶನವನ್ನು ನೀಡಿ, 'ನೀನು ಸುದರ್ಶನನನ್ನು ವರಿಸು. ಆತನು ನನ್ನ ಭಕ್ತನು' ಎಂದು ನುಡಿಯುತ್ತಾಳೆ. ಅಂತೆಯೇ ಆ ರಾಜಪುತ್ರಿಯು ತನ್ನ ಮನಸ್ಸಿನಲ್ಲೇ ಸುದರ್ಶನನನ್ನು ವರಿಸಿ, ಗೋಪ್ಯವಾಗಿ ಬ್ರಾಹ್ಮಣನೊಬ್ಬನನ್ನು ಕರೆದು ಸುದರ್ಶನನಿಗೆ ಸಂದೇಶವನ್ನು ಕಳಿಸಿ ಸ್ವಯಂವರಕ್ಕೆ ಆಮಂತ್ರಿಸಿದಳು. ಜಗನ್ಮಾತೆಯಿಂದ ಪ್ರೇರಿತನಾದ ಸುದರ್ಶನನೂ ಕಾಶೀನಗರಕ್ಕೆ ಆಗಮಿಸಿದನು. ಸಮಸ್ತ ರಾಜರನ್ನೂ ವಿರೋಧಿಸಿ ಶಶಿಕಲೆ–ಸುದರ್ಶನರ ವಿವಾಹವು ನೆರವೇರಿದ್ದರಿಂದ ಕುಪಿತಗೊಂಡ ರಾಜಸಮೂಹವು, ಭಾರದ್ವಾಜಾಶ್ರಮಕ್ಕೆ ಹೊರಟ ಸುದರ್ಶನನ ಮೇಲೆ ಘೋರ ಯುದ್ಧವನ್ನು ಪ್ರಾರಂಭಿಸಿತು. ಆಗ ಸಿಂಹದ ಮೇಲೆ ಕುಳಿತಿರುವ ಉತ್ತಮ ಆಭರಣಗಳನ್ನು ಧರಿಸಿರುವ, ಮಂದಾರ ಪುಷ್ಪಗಳ ಹಾರದಿಂದ ಅಲಂಕೃತಳಾಗಿರುವ ಭವಾನೀದೇವಿಯು ಆವಿರ್ಭವಿಸಿದಳು. ಆಕೆ ಶತ್ರುಸೈನ್ಯವನ್ನು ಸಂಹರಿಸಿ, ತನ್ನ ಭಕ್ತನನ್ನು ರಕ್ಷಿಸಿದಳು. ಆಗ ಶಶಿಕಲೆಯ ತಂದೆಯಾದ ಸುಬಾಹು ರಾಜನು ಅತ್ಯಂತ ಸಂತೋಷ ಹಾಗೂ ಭಕ್ತಿಯಿಂದ ಜಗನ್ಮಾತೆಗೆ ನಮಸ್ಕರಿಸಿ ದುರ್ಗಾದೇವಿಯನ್ನು ಅನೇಕ ವಿಧವಾಗಿ ಸ್ತುತಿಸಿದನು. ಪ್ರಸನ್ನಳಾದ ದೇವಿಯು ವರವನ್ನು ಬೇಡುವಂತೆ ಆತನಿಗೆ ತಿಳಿಸಿದಳು. ಭಕ್ತಿಭರಿತನಾದ ರಾಜನು ದೇವಿಯನ್ನು ಈ ರೀತಿ ಬೇಡಿಕೊಂಡನು.

**ನಗರೇಽತ್ರ ತ್ವಯಾ ಮಾತಃ ಸ್ಥಾತವ್ಯಂ ಮಮ ಸರ್ವದಾ ।**
**ದುರ್ಗಾದೇವೀತಿ ನಾಮ್ನಾದ್ವೈತಂ ಶಕ್ತಿರಿಹ ಸಂಸ್ಥಿತಾ ॥**

''ಹೇ ಮಾತೆಯೇ ! ನನ್ನ ಪಟ್ಟಣದಲ್ಲಿ ಸರ್ವದಾ ಶಕ್ತಿರೂಪಳಾದ ನೀನು 'ದುರ್ಗಾದೇವಿ' ಎಂಬ ಹೆಸರಿನಿಂದ ನೆಲೆಸಿರಬೇಕು. ಪ್ರಪಂಚದಲ್ಲಿ ಈ ಕಾಶೀಪಟ್ಟಣವು ಇರುವವರೆಗೂ ಅದರ ರಕ್ಷಣೆಯನ್ನು ನೀನು ಮಾಡುತ್ತಿರಬೇಕು ಹಾಗೂ ಅಲ್ಲಿಯವರೆಗೂ ಈ ನಗರವು ಪ್ರಸಿದ್ಧವಾಗಿರಬೇಕು.''

ಅದರಂತೆ ದುರ್ಗಾದೇವಿಯು, ''ಮುಕ್ತಿಪ್ರದಾಯಕವಾದ ಈ ಕಾಶಿಯಲ್ಲಿ ನಾನು ಸರ್ವದಾ ನೆಲೆಸಿರುತ್ತೇನೆ'' ಎಂದು ವರವನ್ನನು ಗ್ರಹಿಸಿದಳು.

ಶಿವ-ಶಕ್ತಿ ಸ್ವರೂಪಳು ಈ ದುರ್ಗಾದೇವಿ. ಈ ದೇವಿಯು ಸಮಸ್ತ ಬುದ್ಧಿಗೂ ಅಭಿಮಾನಿ ದೇವತೆಯಾಗಿ, ಸಮಸ್ತ ಜೀವರ ಅಂತರ್ಯಾಮಿಯಾಗಿ, ಜೀವರ ಕ್ರೂರವಾದ ಸಂಕಟಗಳನ್ನು ನಾಶಪಡಿಸುವುದರಿಂದ 'ದುರ್ಗಾ' ಎಂದು ಪ್ರಖ್ಯಾತಳಾಗಿರುವಳು. ಮೂಲ ಪ್ರಕೃತಿಯಿಂದ ಭುವನೇಶ್ವರಿಯ ಸ್ವರೂಪಳಾಗಿರುವಳು.

**'ಐಂ ಹ್ರೀಂ ಕ್ಲೀಂ ಚಾಮುಂಡಾಯೈ ವಿಚ್ಚೇ'** ಎಂಬುದು ದುರ್ಗಾದೇವಿಯ ಉತ್ಕೃಷ್ಟವಾದ ನವಾಕ್ಷರ ಮಂತ್ರ. ಈ ಮಂತ್ರಕ್ಕೆ ಬ್ರಹ್ಮ-ವಿಷ್ಣು-ಮಹೇಶ್ವರರೇ ಋಷಿಗಳು. ಗಾಯತ್ರೀ, ಉಷ್ಣಿಕ್, ಅನುಷ್ಟುಪ್ ಛಂದಸ್ಸುಗಳು. ಮಹಾಕಾಳೀ, ಮಹಾಲಕ್ಷ್ಮೀ, ಮಹಾಸರಸ್ವತಿಯರು ದೇವತೆಗಳು.

ರಕ್ತದಂತಿಕಾ, ದುರ್ಗಾ, ಭ್ರಾಮರೀದೇವಿಯರೇ ಬೀಜ ಸ್ವರೂಪರು. ನಂದಾ, ಶಾಕಾಂಬರೀ, ಭೀಮಾದೇವಿಯರೇ ಶಕ್ತಿಸ್ವರೂಪರು. ಧರ್ಮ, ಅರ್ಥ, ಕಾಮ ಮೋಕ್ಷಗಳೆಂಬ ಪುರುಷಾರ್ಥಗಳೇ ಫಲಗಳು. ಐಂ, ಹ್ರೀಂ, ಕ್ಲೀಂ ಎಂಬುದು ಬೀಜಾಕ್ಷರಗಳು. ಇಲ್ಲಿ 'ಐಂ' ಎಂಬುದು ಮಹಾಕಾಳಿಯನ್ನೂ, 'ಹ್ರೀಂ' ಎಂಬುದು ಮಹಾಲಕ್ಷ್ಮಿಯನ್ನೂ, 'ಕ್ಲೀಂ' ಎಂಬುದು ಮಹಾ ಸರಸ್ವತಿಯನ್ನೂ ಸೂಚಿಸುತ್ತದೆ. 'ವಿಚ್ಚೇ' ಎಂಬಲ್ಲಿ ವಿತ್-ಚ-ಇ ಎಂಬ ಮೂರು ಪದಗಳು ಕ್ರಮವಾಗಿ ಸತ್-ಚಿತ್-ಆನಂದವನ್ನು ಸೂಚಿಸುತ್ತವೆ. **ಚಾಮುಂಡಾ** ಎಂಬ ಪದವು ಬ್ರಹ್ಮವಿದ್ಯಾವಾಚಕವಾಗಿರುವುದು.

ಇಂತಹ ದುರ್ಗಾದೇವಿಯ ನವಸ್ವರೂಪಗಳು ಅತ್ಯಂತ ಪ್ರಸಿದ್ಧ. ವಿಶೇಷವಾಗಿ ನವರಾತ್ರಿಯಲ್ಲಿ ಅವುಗಳ ಪೂಜೆಗೆ ಮಹತ್ವ. *ಬ್ರಹ್ಮವೈವರ್ತಪುರಾಣ* ದಲ್ಲಿ ಈ ನವದುರ್ಗೆಯರ ಪ್ರಸ್ತಾಪ ಕಂಡುಬರುತ್ತದೆ.

**ಪ್ರಥಮಂ ಶೈಲಪುತ್ರೀ ಚ ದ್ವಿತೀಯಂ ಬ್ರಹ್ಮಚಾರಿಣೀ ।**
**ತೃತೀಯಂ ಚಂದ್ರಘಂಟೇತಿ ಕೂಷ್ಮಾಂಡೇತಿ ಚತುರ್ಥಕಮ್ ॥**
**ಪಂಚಮಂ ಸ್ಕಂದಮಾತೇತಿ ಷಷ್ಠಂ ಕಾತ್ಯಾಯನೀತಿ ಚ ।**
**ಸಪ್ತಮಂ ಕಾಲರಾತ್ರಿಶ್ಚ ಮಹಾಗೌರೀತಿ ಚಾಷ್ಟಕಮ್ ॥**
**ನವಮಂ ಸಿದ್ಧದಾ ಪ್ರೋಕ್ತಾ ನವದುರ್ಗಾಃ ಪ್ರಕೀರ್ತಿತಾಃ ।**
**ಉಕ್ತಾನ್ಯೇತಾನಿ ನಾಮಾನಿ ಬ್ರಹ್ಮಣೈವ ಮಹಾತ್ಮನಾ ॥**

ಬ್ರಹ್ಮದೇವನೇ ಈ ಒಂಬತ್ತು ದುರ್ಗೆಯರ ಹೆಸರುಗಳನ್ನು ತಿಳಿಸಿರುವನು. ಈ ದುರ್ಗಾಪೂಜೆಯಿಂದ ಕೇವಲ ಐಹಿಕ ಸುಖ

ಗಳಷ್ಟೇ ಅಲ್ಲದೆ ಹಂತಹಂತವಾಗಿ ಆಧ್ಯಾತ್ಮಿಕ ಪ್ರಗತಿಯತ್ತ ಸಾಗುವುದು ಯೋಗಿಗಳ ಗುರಿಯಾಗಿರುತ್ತದೆ.

**೧. ಶೈಲಪುತ್ರೀ :** ದುರ್ಗಾದೇವಿಯ ಮೊದಲ ರೂಪವನ್ನು 'ಶೈಲಪುತ್ರೀ' ಎನ್ನ ಲಾಗಿದೆ:

**ವಂದೇ ವಾಂಛಿತಲಾಭಾಯ ಚಂದ್ರಾರ್ಧಕೃತಶೇಖರಾಮ್ ।**
**ವೃಷಾರೂಢಾಂ ಶೂಲಧರಾಂ ಶೈಲಪುತ್ರೀಂ ಯಶಸ್ವಿನೀಮ್ ॥**



ಪರ್ವತರಾಜ ಹಿಮವಂತನ ಮಗಳಾಗಿ ಜನಿಸಿದ ಈಕೆಯು ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿರುವಳು. ವೃಷಭಾರೂಢಳಾಗಿ, ಶೂಲವನ್ನು ಕೈಯಲ್ಲಿ ಹಿಡಿದಿರುವಳು.

ದಕ್ಷನ ಮಗಳಾಗಿದ್ದ ಸತಿಯು ಶಿವನನ್ನು ವರಿಸಿದ್ದಳು. ದಕ್ಷನು ಒಮ್ಮೆ ತಾನು ನಡೆಸಿದ ಯಜ್ಞಕ್ಕೆ ಶಿವನನ್ನು ಆಹ್ವಾನಿಸಲಿಲ್ಲ. ಶಿವನ ಆದೇಶವನ್ನು ಮೀರಿ ಸತಿಯು ತಂದೆಯ ಮನೆಗೆ ಆಗಮಿಸುತ್ತಾಳೆ. ಅಲ್ಲಿ ತನ್ನ ಪತಿಗೆ ಹಾಗೂ ತನಗೆ ಉಂಟಾದ ಅಪಮಾನವನ್ನು ಸಹಿಸಲಾರದೆ ಯೋಗಾಗ್ನಿಯಿಂದ ಸುಟ್ಟು ಭಸ್ಮಳಾಗುತ್ತಾಳೆ. ಕ್ರೋಧಗೊಂಡ ಶಿವನು ವೀರಭದ್ರ ಮುಂತಾದ ಗಣಗಳ ಮೂಲಕ ದಕ್ಷನ ಯಜ್ಞವನ್ನು ಧ್ವಂಸಗೊಳಿಸುತ್ತಾನೆ. ಅನಂತರ ದೇವಿಯು ಹಿಮವಂತನ ಪುತ್ರಿಯಾಗಿ ಅವತರಿಸುತ್ತಾಳೆ. ಆದ್ದರಿಂದ ಶೈಲಪುತ್ರೀ, ಪಾರ್ವತೀ, ಹೈಮವತೀ ಮುಂತಾದ ಹೆಸರುಗಳಿಂದ ಪ್ರಸಿದ್ಧಳಾಗುತ್ತಾಳೆ. ಶಿವನನ್ನೇ ಪತಿಯನ್ನಾಗಿ ಹೊಂದುತ್ತಾಳೆ.

ನವದುರ್ಗೆಯರಲ್ಲಿ ಮೊದಲನೆಯವಳಾದ **ಶೈಲಪುತ್ರಿ**ಯ ಶಕ್ತಿ ಹಾಗೂ ಮಹತ್ವಗಳು ಅಪಾರವಾದುದು. ನವರಾತ್ರಿಯ ಮೊದಲ ದಿನ ಪಾಡ್ಯದಂದು ಈಕೆಯನ್ನು ಪೂಜಿಸಲಾಗುತ್ತದೆ. ಈ ದಿನದಂದು ಯೋಗಿಗಳು ತಮ್ಮ ಮನಸ್ಸನ್ನು ಮೂಲಾಧಾರ ಚಕ್ರದಲ್ಲಿ ನೆಲೆಗೊಳಿಸುತ್ತಾರೆ. ಅವರ ಯೋಗಸಾಧನೆಯು ಇಲ್ಲಿಂದಲೇ ಪ್ರಾರಂಭವಾಗುತ್ತದೆ.

**೨. ಬ್ರಹ್ಮಚಾರಿಣೀ:** ದುರ್ಗಾದೇವಿಯ ಎರಡನೇ ಸ್ವರೂಪ 'ಬ್ರಹ್ಮಚಾರಿಣಿ.'

**ದಧಾನಾ ಕರಪದ್ಮಾಭ್ಯಾಮಕ್ಷಮಾಲಾಕಮಂಡಲೂ ।**
**ದೇವೀ ಪ್ರಸೀದತು ಮಯಿ ಬ್ರಹ್ಮಚಾರಿಣ್ಯನುತ್ತಮಾ ॥**

ಇಲ್ಲಿ 'ಬ್ರಹ್ಮ' ಎಂದರೆ ತಪಸ್ಸು. ಈ ದೇವಿ ತಪಸ್ಸನ್ನಾಚರಿಸುವವಳು. ಈಕೆಯ ಸ್ವರೂಪವು ಪೂರ್ಣ ಜ್ಯೋತಿರ್ಮಯ ಮತ್ತು ಅತ್ಯಂತ ಭವ್ಯವಾದುದು. ಈಕೆಯು ಬಲಗೈಯಲ್ಲಿ ಅಕ್ಷಮಾಲೆಯನ್ನೂ, ಎಡಗೈಯಲ್ಲಿ ಕಮಂಡಲುವನ್ನೂ ಹಿಡಿದಿರುವಳು.



ಈ ದೇವಿಯು ಹಿಮವಂತನ ಪುತ್ರಿಯಾಗಿ ಅವತರಿಸಿದಾಗ, ನಾರದರ ಉಪದೇಶದಂತೆ ಶಿವನನ್ನು ಪತಿಯನ್ನಾಗಿ ಪಡೆಯಲು ಅತ್ಯಂತ ಕಠಿಣವಾದ ತಪಸ್ಸನ್ನಾಚರಿಸಿದಳು. ಆದ್ದರಿಂದ ಈಕೆಯನ್ನು ತಪಶ್ಚಾರಿಣೀ ಅಥವಾ **ಬ್ರಹ್ಮಚಾರಿಣೀ** ಎನ್ನಲಾಯಿತು.

ಸಹಸ್ರಾರು ವರ್ಷಗಳ ಕಠಿಣ ತಪಸ್ಸಿನಿಂದ ಈಕೆಯ ಶರೀರವು ಅತ್ಯಂತ ಕೃಶವಾಯಿತು. ಕಠೋರ ತಪಸ್ಸಿನ ತಾಪದಿಂದ ಮೂರು ಲೋಕಗಳಲ್ಲೂ ಹಾಹಾಕಾರವುಂಟಾಯಿತು. ಸಮಸ್ತ ದೇವತೆಗಳು, ಋಷಿಗಳು ಈಕೆಯನ್ನು ಪ್ರಶಂಸಿಸತೊಡಗಿದರು. ಪಿತಾಮಹ ಬ್ರಹ್ಮನು ಪ್ರತ್ಯಕ್ಷನಾಗಿ, ''ಹೇ ದೇವಿ! ಇಂದಿನ ವರೆಗೆ ಯಾರೂ ಸಹ ಇಂತಹ ಘೋರ ತಪಸ್ಸನ್ನು ಆಚರಿಸಿಲ್ಲ. ಸರ್ವವಿಧದಿಂದಲೂ ನಿನ್ನ ಮನೋಭಿಲಾಷೆಯು ಈಡೇರುವುದು. ಶಿವನು ನಿನಗೆ ಪತಿಯಾಗುವನು. ನೀನು ತಪಸ್ಸನ್ನು ನಿಲ್ಲಿಸಿ ತಂದೆಯ ಮನೆಗೆ ತರಳು'' ಎಂದು ಅನುಗ್ರಹಿಸಿದನು.

ಜಗನ್ಮಾತೆಯ ಈ ಎರಡನೆಯ ಸ್ವರೂಪ ಭಕ್ತರಿಗೆ, ಸಾಧಕರಿಗೆ ಮಹತ್ತರ ಫಲವನ್ನು ನೀಡುತ್ತದೆ. ಈಕೆಯ ಉಪಾಸನೆಯಿಂದ ತಪಸ್ಸು, ತ್ಯಾಗ, ವೈರಾಗ್ಯಗಳ ವೃದ್ಧಿಯಾಗುತ್ತದೆ. ಎಲ್ಲೆಡೆಯೂ ವಿಜಯ ಪ್ರಾಪ್ತವಾಗುತ್ತದೆ.

ನವರಾತ್ರಿಯ ಎರಡನೆಯ ದಿನ ಬಿದಿಗೆ ಅಥವಾ ದ್ವಿತೀಯಾ ತಿಥಿಯಲ್ಲಿ ಈಕೆಯ ಪೂಜೆ. ಅಂದು ಸಾಧಕನ ಮನಸ್ಸು 'ಸ್ವಾಧಿಷ್ಠಾನ' ಚಕ್ರದಲ್ಲಿ ನೆಲೆಗೊಳ್ಳುತ್ತದೆ. ದೇವಿಯ ಕೃಪೆಯಿಂದ ಆತನಿಗೆ ಸ್ಥಿರ ಬುದ್ಧಿಯು ಮೂಡುತ್ತದೆ.

**೩. ಚಂದ್ರಘಂಟಾ:** ದೇವಿಯ ಮೂರನೆಯ ಸ್ವರೂಪ 'ಚಂದ್ರಘಂಟಾ.'

**ಪಿಂಡಜಪ್ರವರಾರೂಢಾ ಚಂಡಕೋಪಾಸ್ತ್ರಕೈರ್ಯುತಾ ।**
**ಪ್ರಸಾದಂ ತನುತೇ ಮಹ್ಯಂ ಚಂದ್ರಘಂಟೇತಿ ವಿಶ್ರುತಾ ॥**

ಈಕೆಯು ಶಿರಸ್ಸಿನಲ್ಲಿ ಘಂಟೆಯಾಕಾರದ ಅರ್ಧಚಂದ್ರನನ್ನು ಧರಿಸಿರುವಳು. ಈ ದೇವಿಯ ಶರೀರವು ಚಿನ್ನದ ಕಾಂತಿಯಿಂದ ಹೊಳೆಯುತ್ತಿರುವುದು. ಹತ್ತು ಕೈಗಳನ್ನು ಹೊಂದಿರುವ ದೇವಿಯು ಖಡ್ಗ, ಬಾಣ ಮುಂತಾದ ಶಸ್ತ್ರಾಸ್ತ್ರಗಳನ್ನು ಧರಿಸಿರುವಳು. ಸಿಂಹವನ್ನು ವಾಹನವನ್ನಾಗಿ ಹೊಂದಿರುವಳು. ಯುದ್ಧಕ್ಕೆ ಹೊರಟಂತೆ ತೋರುವಳು. ಘಂಟೆಯಂತಹ ಭಯಂಕರವಾದ, ಗಂಭೀರವಾದ ಈಕೆಯ ಧ್ವನಿಯಿಂದ ರಾಕ್ಷಸರು, ದುರ್ಜನರು ಸರ್ವದಾ ನಡುಗುತ್ತಿರುವರು.

ಈ ದೇವಿಯು ದುಷ್ಟರನ್ನು ಶಿಕ್ಷಿಸುವವಳಾದರೂ ಈಕೆಯ ಸ್ವರೂಪವು ಸೌಮ್ಯವಾಗಿರುವುದು ಹಾಗೂ ಶಾಂತತೆಯಿಂದ ಕೂಡಿರುವುದು. ಈಕೆಯನ್ನಾರಾಧಿಸುವ ಸಾಧಕರಿಗೆ ಪರಾಕ್ರಮ, ನಿರ್ಭಯತೆ



ಗಳು ದೊರಕುತ್ತವೆ. ಮತ್ತು ವಿನಯಗುಣವೂ ವರ್ಧಿಸುತ್ತದೆ. ಆತನ ಶರೀರದ ಕಾಂತಿ ಹೆಚ್ಚುತ್ತದೆ. ಆ ವ್ಯಕ್ತಿಯಿಂದ ಇತರರೂ ಶಾಂತಿ ಹಾಗೂ ಸುಖವನ್ನು ಅನುಭವಿಸುತ್ತಾರೆ. ದೇವಿಯ ಈ ಸ್ವರೂಪದ ಉಪಾಸನೆಯಿಂದ ಸಾಂಸಾರಿಕ ಕಷ್ಟಗಳು ದೂರವಾಗಿ, ಇಹ-ಪರ ಸದ್ಗತಿಯು ದೊರಕುತ್ತದೆ. ನವರಾತ್ರಿಯ ಮೂರನೆಯ ದಿನ ತದಿಗೆ ಅಥವಾ ತೃತೀಯಾ ದಿನದಂದು ದೇವಿಯ ಚಂದ್ರಘಂಟಾ ಸ್ವರೂಪದ ಪೂಜೆ ನಡೆಯುತ್ತದೆ. ಅಂದು ಸಾಧಕನ ಮನಸ್ಸು 'ಮಣಿಪೂರ' ಚಕ್ರವನ್ನು ಪ್ರವೇಶಿಸುತ್ತದೆ. ಆಗ ದೇವಿಯ ಕೃಪೆಯಿಂದ ಅಲೌಕಿಕ ವಸ್ತುಗಳ ದರ್ಶನವಾಗುತ್ತದೆ. ದಿವ್ಯ ಸುಗಂಧವನ್ನು ಆಘ್ರಾಣಿಸಬಹುದು. ಮಂಗಳ ಧ್ವನಿಗಳು ಕೇಳಿಬರುತ್ತವೆ. ಈಕೆಯ ಘಂಟಾಧ್ವನಿಯು ತನ್ನ ಭಕ್ತರ ಪ್ರೇತಬಾಧೆಗಳನ್ನು ನಿವಾರಿಸುತ್ತದೆ. ಈಕೆಯ ಧ್ಯಾನ ಮಾಡತೊಡಗಿದಾಗಲೇ ಶರಣಾಗತನ ರಕ್ಷಣೆಗಾಗಿ ಈ ಘಂಟೆಯ ಧ್ವನಿಯು ಮೊಳಗುತ್ತದೆ.

**೪. ಕೂಷ್ಮಾಂಡಾ:** ದೇವಿಯ ನಾಲ್ಕನೆಯ ಸ್ವರೂಪ 'ಕೂಷ್ಮಾಂಡಾ.'

**ಸುರಾಸಂಪೂರ್ಣಕಲಶಂ ರುಧಿರಾಪ್ಲುತಮೇವ ಚ ।**
**ದಧಾನಾ ಹಸ್ತಪದ್ಮಾಭ್ಯಾಂ ಕೂಷ್ಮಾಂಡಾ ಶುಭದಾಸ್ತು ಮೇ ॥**

ತನ್ನ ಮಂದ-ಮಧುರ ನಗುವಿನಿಂದ ಅಂಡ ಅಂದರೆ ಬ್ರಹ್ಮಾಂಡವನ್ನು ಸೃಷ್ಟಿಸಿರುವುದರಿಂದ ಈಕೆಯನ್ನು 'ಕೂಷ್ಮಾಂಡ' ಎನ್ನಲಾಗಿದೆ.

ಸೃಷ್ಟಿಗೆ ಆದಿಯಲ್ಲಿ ಎಲ್ಲೆಡೆ ಅಂಧಕಾರವೇ ತುಂಬಿರುವಾಗ ಈ ದೇವಿಯು ತನ್ನ ಸೂಕ್ಷ್ಮ ನಗುವಿನಿಂದ ಬ್ರಹ್ಮಾಂಡವನ್ನು ಸೃಷ್ಟಿಸಿದಳು. ಆದ್ದರಿಂದ ಸೃಷ್ಟಿಯ ಆದಿ ಸ್ವರೂಪಳು ಈಕೆ. ಈ ರೀತಿ ಇವಳೇ ಆದಿಶಕ್ತಿಯು. ಸೂರ್ಯಮಂಡಲದೊಳಗೆ ಈಕೆಯು ನೆಲೆಸಿರುವಳು. ಈಕೆಯ ಶರೀರ ಕಾಂತಿಯು ಸೂರ್ಯನಿಗೂ ಮಿಗಿಲಾದುದು. ಈಕೆಯ ತೇಜಸ್ಸು ಹಾಗೂ ಪ್ರಕಾಶದಿಂದಲೇ ಸಮಸ್ತ ದಿಕ್ಕುಗಳೂ ಪ್ರಕಾಶಮಾನವಾಗಿರುವುವು. ಬ್ರಹ್ಮಾಂಡದ ಸಮಸ್ತ ಜೀವಿಗಳಲ್ಲಿ ಈಕೆಯ ತೇಜಸ್ಸಿನ ಛಾಯೆಯನ್ನು ಕಾಣಬಹುದು.



ಎಂಟು ಭುಜಗಳಿರುವ ಈ ದೇವಿಯನ್ನು ಅಷ್ಟಭುಜಾ ದೇವಿ ಎಂದೂ ಕರೆಯಲಾಗುತ್ತದೆ. ಎಂಟು ಕೈಗಳಲ್ಲಿ ಕಮಂಡಲು, ಬಿಲ್ಲು, ಬಾಣ, ಕಮಲ, ಅಮೃತದ ಕಲಶ, ಚಕ್ರ, ಗದೆ, ಜಪಮಾಲೆಯನ್ನು ಧರಿಸಿರುವಳು. ಕೂಷ್ಮಾಂಡ ಅಂದರೆ ಕುಂಬಳಕಾಯಿಯ ಬಲಿ ಈಕೆಗೆ ಅತ್ಯಂತ ಪ್ರಿಯವಾದುದು. ಇದರಿಂದಲೂ ಈಕೆಗೆ **ಕೂಷ್ಮಾಂಡಾ** ಎಂಬ ಹೆಸರು ಬಂದಿದೆ.

ಈ ದೇವಿಯನ್ನು ಆರಾಧಿಸುವುದರಿಂದ ಆಧಿ-ವ್ಯಾಧಿಗಳಿಂದ ಸಂಪೂರ್ಣ ಮುಕ್ತನಾಗುವನು; ಸುಖಸಮೃದ್ಧಿ ಉಂಟಾಗುವುದು.

ನವರಾತ್ರಿಯ ನಾಲ್ಕನೆಯ ದಿನ ಅಂದರೆ ಚತುರ್ಥಿ ತಿಥಿಯಂದು ಈ ದೇವಿಯನ್ನು ಪೂಜಿಸಲಾಗುತ್ತದೆ. ಅಂದು ಸಾಧಕನ ಮನಸ್ಸು 'ಅನಾಹತ' ಚಕ್ರದಲ್ಲಿ ನೆಲೆಸುತ್ತದೆ. ಅಂದು ಆತನು ಪವಿತ್ರ ಹಾಗೂ ನಿಶ್ಚಲ ಮನಸ್ಸಿನಿಂದ ದೇವಿಯನ್ನು ಧ್ಯಾನಿಸಬೇಕು. ಇದರಿಂದ ಆಯುಸ್ಸು, ಬಲ, ಆರೋಗ್ಯ ವೃದ್ಧಿಯಾಗುತ್ತದೆ. ಬೇಗ ಪ್ರಸನ್ನಳಾಗುವ ಈ ದೇವಿಯ ಕೃಪೆಯಿಂದಾಗಿ ಸಾಧಕನು ಸುಲಭವಾಗಿ ಪರಮಪದವನ್ನು ಪಡೆಯಬಹುದು.

**೫. ಸ್ಕಂದಮಾತಾ:** ಜಗನ್ಮಾತೆಯ ಐದನೆಯ ಸ್ವರೂಪ 'ಸ್ಕಂದಮಾತಾ'.

**ಸಿಂಹಾಸನಗತಾ ನಿತ್ಯಂ ಪದ್ಮಾಶ್ರಿತ ಕರದ್ವಯಮ್ ।**
**ಶುಭದಾಽಸ್ತು ಸದಾ ದೇವೀ ಸ್ಕಂದಮಾತಾ ಯಶಸ್ವಿನೀ ॥**

ಕುಮಾರ, ಕಾರ್ತಿಕೇಯ, ಸುಬ್ರಹ್ಮಣ್ಯ ಎಂಬ ಹಲವು ಹೆಸರುಗಳಿಂದ ಪೂಜಿಸಲ್ಪಡುವ ಸ್ಕಂದನು ದೇವಸೇನಾಪತಿ. ಈತನ ಜನನಿಯಾದ್ದರಿಂದ 'ಸ್ಕಂದಮಾತಾ' ಎಂಬ ಹೆಸರಿನಿಂದ ದೇವಿ ಯನ್ನು ಆರಾಧಿಸಲಾಗುತ್ತದೆ.



ಬಾಲಕನಾದ ಸ್ಕಂದನು ಈಕೆಯ ತೊಡೆಯ ಮೇಲೆ ಕುಳಿತಿರುವನು. ಈ ದೇವಿಯು ನಾಲ್ಕು ಭುಜಗಳನ್ನು ಹೊಂದಿರುವಳು. ಬಲಗಡೆಯ ಮೇಲಿನ ಹಸ್ತದಿಂದ ಸ್ಕಂದನನ್ನು ಹಿಡಿದುಕೊಂಡಿರುವಳು. ಮೇಲಕ್ಕೆ ಎತ್ತಿರುವ ಕೆಳಗಿನ ಬಲಗೈಯಲ್ಲಿ ಕಮಲವನ್ನು ಹಿಡಿದಿರುವಳು. ಎಡಗಡೆಯ ಮೇಲಿನ ಕೈಯಲ್ಲಿ ಅಭಯವನ್ನು ತೋರುತ್ತಿರುವಳು. ಕೆಳಗಿನ ಎಡಗೈಯಲ್ಲಿ ಕಮಲವನ್ನು ಹಿಡಿದಿರುವಳು. ಶ್ವೇತವರ್ಣದಿಂದ ಕಂಗೊಳಿಸುತ್ತಿರುವ ಈಕೆಯು ಕಮಲದಲ್ಲಿ ಆಸೀನಳಾಗಿರುವಳು. ಆದ್ದರಿಂದ ಈಕೆಯನ್ನು 'ಪದ್ಮಾಸನಾದೇವಿ' ಎಂದೂ ಕರೆಯಲಾಗಿದೆ. ಸಿಂಹವು ಈಕೆಯ ವಾಹನ.

ಸ್ಕಂದಮಾತೆಯ ಉಪಾಸನೆಯಿಂದ ಸಾಧಕನ ಎಲ್ಲ ಬಯಕೆಗಳೂ ಪೂರ್ಣವಾಗುತ್ತವೆ. ಸುಖ-ಶಾಂತಿಗಳು ಲಭಿಸುತ್ತವೆ.

ಮೋಕ್ಷದ ಹಾದಿಯು ಸುಗಮವಾಗುತ್ತದೆ. ಈಕೆಯೊಡನೆ ಬಾಲಕ ಸ್ಕಂದನನ್ನೂ ಪೂಜಿಸಿದಂತಾಗುವುದರಿಂದ ಹೆಚ್ಚಿನ ಮಹತ್ವವು ಪ್ರಾಪ್ತ ವಾಗುತ್ತದೆ. ಈ ದೇವಿಯು ಸೂರ್ಯಮಂಡಲದ ಅಧಿಷ್ಠಾತ್ರಿ ದೇವಿ ಯಾದ್ದರಿಂದ ಉಪಾಸಕನಿಗೆ ಅಲೌಕಿಕ ತೇಜಸ್ಸು ಹಾಗೂ ಕಾಂತಿಯು ಲಭಿಸುತ್ತದೆ.

ನವರಾತ್ರಿಯ ಐದನೆಯ ದಿನ ಪಂಚಮೀ ತಿಥಿಯಂದು ದೇವಿಯ ಈ ಸ್ವರೂಪದ ಪೂಜೆ ನಡೆಯುತ್ತದೆ. ಅಂದು ಸಾಧಕನ ಮನಸ್ಸು 'ವಿಶುದ್ಧ' ಚಕ್ರದಲ್ಲಿ ನೆಲೆಸುತ್ತದೆ. ಆಗ ಅಲ್ಲಿ ಸಮಸ್ತ ಬಾಹ್ಯಕ್ರಿಯೆಗಳು ಹಾಗೂ ಚಿತ್ತವೃತ್ತಿಗಳು ಲಯವಾಗುತ್ತವೆ. ಮನಸ್ಸು ಸಂಪೂರ್ಣವಾಗಿ ದೇವಿಯಲ್ಲಿ ತಲ್ಲೀನವಾಗಿ ಬಂಧನ ಗಳಿಂದ ಮುಕ್ತಿಯನ್ನು ಪಡೆಯಬಹುದು.

**೬. ಕಾತ್ಯಾಯನೀ:** ಜಗನ್ಮಾತೆಯ ಆರನೆಯ ಸ್ವರೂಪ 'ಕಾತ್ಯಾಯನೀ.'

**ಚಂದ್ರಹಾಸೋಜ್ವಲಕರಾ ಶಾರ್ದೂಲವರವಾಹನಾ ।**
**ಕಾತ್ಯಾಯನೀ ಶುಭಂ ದದ್ಯಾತ್ ದೇವೀ ದಾನವಘಾತಿನೀ ॥**

**ಕಾತ್ಯಾಯನಿ** ಎಂಬ ಹೆಸರು ಬರಲು ಕೆಲವು ಉಲ್ಲೇಖಗಳು ಹೀಗಿವೆ.

೧. 'ಕತ' ಎಂಬ ಮಹರ್ಷಿಯ ಪುತ್ರ ಕತನಾದ. ಇವರ ಗೋತ್ರ ದಲ್ಲಿ ಜನಿಸಿದವರು ಮಹರ್ಷಿ ಕಾತ್ಯಾಯನರು. ಇವರು ದೇವಿಯನ್ನು ಆರಾಧಿಸುತ್ತಾ ಅನೇಕ ವರ್ಷಗಳ ಕಾಲ ಕಠಿಣ ತಪಸನ್ನು ಮಾಡಿ ಭಗ ವತಿಯು ತಮ್ಮ ಪುತ್ರಿಯಾಗಿ ಜನಿಸ ಬೇಕೆಂಬ ವರವನ್ನು ಪಡೆದರು. ಅದರಂತೆ ಕಾತ್ಯಾಯನರ ಪುತ್ರಿ ಯಾಗಿ ಈ ದೇವಿಯು 'ಕಾತ್ಯಾ ಯನಿ' ಎಂದು ಪ್ರಸಿದ್ಧಳಾದಳು.



೨. ಮಹಿಷಾಸುರನ ಅಟ್ಟ ಹಾಸವು ವಿಪರೀತವಾದಾಗ ಆತ ನನ್ನು ನಿಗ್ರಹಿಸಲು ಅಸಮರ್ಥ ರಾದ ಸಮಸ್ತ ದೇವತೆಗಳು ತಮ್ಮ ತಮ್ಮ ತೇಜಸ್ಸಿನ ಅಂಶಗಳಿಂದ ದೇವಿಯೊಬ್ಬಳನ್ನು ಸೃಷ್ಟಿಸಿದರು. ಕಾತ್ಯಾಯನ ಮಹರ್ಷಿ ಮೊದಲು ಆಕೆಯನ್ನು ಪೂಜಿಸಿದ್ದರಿಂದ **'ಕಾತ್ಯಾಯನಿ'** ಎಂದು ಕರೆದರು.

ಭಾದ್ರಪದ ಕೃಷ್ಣ ಚತುರ್ದಶಿಯಂದು ಈಕೆಯು ಆವಿರ್ಭವಿಸಿ ಆಶ್ವಯುಜ ಶುಕ್ಲ ಸಪ್ತಮಿ, ಅಷ್ಟಮಿ, ನವಮಿಯ ಮೂರು ದಿನಗಳ ಕಾಲ ಕಾತ್ಯಾಯನ ಮಹರ್ಷಿಗಳ ಪೂಜೆಯನ್ನು ಸ್ವೀಕರಿಸಿ ದಶಮಿ ಯಂದು ಮಹಿಷಾಸುರನನ್ನು ಸಂಹರಿಸಿದಳು.

ಈ ಕಾತ್ಯಾಯನಿ ದೇವಿಯು ಅಮೋಘ ಫಲದಾಯಿನಿ. ವ್ರಜದ ಗೋಪಿಕೆಯರು ಭಗವಾನ್ ಕೃಷ್ಣನನ್ನು ತಮ್ಮ ಪತಿಯನ್ನಾಗಿ ಪಡೆಯ ಬೇಕೆಂಬ ಬಯಕೆಯಿಂದ ಯಮುನೆಯ ತೀರದಲ್ಲಿ ದೇವಿ ಕಾತ್ಯಾ ಯನಿಯನ್ನು ಭಕ್ತಿಯಿಂದ ಪೂಜಿಸಿದ್ದರು. ವ್ರಜಮಂಡಲದ ಅಧಿ ಷ್ಠಾತ್ರಿ ದೇವಿಯಾಗಿ ಈಕೆಯು ಪ್ರತಿಷ್ಠಾಪನೆಗೊಂಡಿರುವಳು. ಅತ್ಯಂತ ದಿವ್ಯ ಹಾಗೂ ಭವ್ಯ ಸ್ವರೂಪವನ್ನು ಹೊಂದಿರುವಳು. ಚಿನ್ನದ ಬಣ್ಣದಿಂದ ಹೊಳೆಯುತ್ತಿರುವಳು. ನಾಲ್ಕು ಭುಜಗಳನ್ನು ಹೊಂದಿರುವಳು. ಬಲಗಡೆಯ ಮೇಲಿನ ಕೈ ಅಭಯ ಮುದ್ರೆ ಯಲ್ಲಿರುವುದು. ಕೆಳಗಿನ ಕೈ ವರಮುದ್ರೆಯನ್ನು ತೋರುತ್ತಿರುವುದು. ಎಡಗಡೆಯ ಮೇಲಿನ ಕೈಯಲ್ಲಿ ಖಡ್ಗವನ್ನೂ, ಕೆಳಗಿನ ಕೈಯಲ್ಲಿ ಕಮಲವನ್ನೂ ಧರಿಸಿರುವಳು. ಈಕೆಯ ವಾಹನ ಸಿಂಹ.

ನವರಾತ್ರಿಯ ಆರನೆಯ ದಿನ ಷಷ್ಠೀ ತಿಥಿಯಂದು ದೇವಿಯ ಈ ಸ್ವರೂಪದ ಪೂಜೆ ನಡೆಯುತ್ತದೆ. ಅಂದು ಸಾಧಕನ ಮನಸ್ಸು 'ಆಜ್ಞಾ' ಚಕ್ರದಲ್ಲಿ ನೆಲೆಸುತ್ತದೆ. ಸಂಪೂರ್ಣ ಶರಣಾಗತಿಯನ್ನು ಹೊಂದುವ ಸಾಧಕನಿಗೆ ದೇವಿಯ ದರ್ಶನ ಪ್ರಾಪ್ತವಾಗುತ್ತದೆ. ಚತುರ್ವಿಧ ಪುರುಷಾರ್ಥಗಳೂ ಲಭಿಸುತ್ತವೆ. ಸಮಸ್ತ ಲೌಕಿಕ ದುರಿತ ಗಳು ಮಾಯವಾಗಿ ಪರಮಪದವು ಲಭ್ಯವಾಗುತ್ತದೆ.

**೭. ಕಾಲರಾತ್ರಿ:** ದುರ್ಗೆಯ ಏಳನೆಯ ಸ್ವರೂಪ 'ಕಾಲರಾತ್ರಿ.'

**ಏಕವೇಣೀ ಜಪಾಕರ್ಣಪೂರಾ ನಗ್ನಾ ಖರಸ್ಥಿತಾ**
**ಲಂಬೋಷ್ಠೀ ಕರ್ಣಿಕಾಕರ್ಣೀ ತೈಲಾಭ್ಯಕ್ತಶರೀರಿಣೀ ।**
**ವಾಮಪಾದೋಲ್ಲಸಲ್ಲೋಹಲತಾ ಕಂಟಕಭೂಷಣಾ**
**ವರ್ಧನಮೂರ್ಧಧ್ವಜಾ ಕೃಷ್ಣಾ ಕಾಲರಾತ್ರಿರ್ಭಯಂಕರೀ ॥**

ಈ ದೇವಿಯ ಶರೀರವು ದಟ್ಟವಾದ ಕಪ್ಪು ಬಣ್ಣದಿಂದ ಕೂಡಿರು ವುದು. ತಲೆಯಕೂದಲು ಬಿಚ್ಚಿ ಹರಡಿಕೊಂಡಿರುವುದು. ಕತ್ತಿನಲ್ಲಿ ಮಿಂಚಿನಂತೆ ಹೊಳೆಯುವ ಮಾಲೆಯಿರುವುದು. ಮೂರು ಕಣ್ಣು ಗಳನ್ನು ಹೊಂದಿರುವಳು. ಈಕೆಯ ಉಚ್ಛ್ವಾಸ ನಿಃಶ್ವಾಸದಿಂದ ಅಗ್ನಿಯ ಭಯಂಕರ ಜ್ವಾಲೆಗಳು ಹೊರಡುತ್ತಿರುವುವು. ಕತ್ತೆಯು ಈಕೆಯ ವಾಹನ. ನಾಲ್ಕು ಭುಜಗಳನ್ನು ಹೊಂದಿರುವಳು. ಮೇಲಕ್ಕೆ ಎತ್ತಿರುವ ಬಲಗೈ ವರಮುದ್ರೆಯನ್ನು ತೋರುತ್ತಿರುವುದು. ಮೇಲಿನ ಎಡಗೈಯಲ್ಲಿ ಕಬ್ಬಿಣದ ಮುಳ್ಳು ಹಾಗೂ ಕೆಳಗೈಯಲ್ಲಿ ಖಡ್ಗವನ್ನು ಹಿಡಿದಿರುವಳು.

ಕಾಲರಾತ್ರಿ ದುರ್ಗೆಯ ಸ್ವರೂಪವು ಭಯಂಕರವಾಗಿದ್ದರೂ ಈಕೆಯು ಶುಭಫಲವನ್ನು ನೀಡು ವಳು. ಆದ್ದರಿಂದ 'ಶುಭಂಕರೀ' ಎಂದೂ ಈಕೆಯನ್ನು ಕರೆಯಲಾಗು ತ್ತದೆ. ಭಕ್ತರಿಗೆ ಸರ್ವದಾ ಶುಭವನ್ನೇ ಉಂಟುಮಾಡಿ ದುಷ್ಟರ ನಾಶವನ್ನು ಮಾಡುವಳು. ಗ್ರಹಗಳ ಬಾಧೆ ಯನ್ನು ಹೋಗಲಾಡಿಸುವಳು. ಕಾಲರಾತ್ರಿ ದುರ್ಗೆಯನ್ನು ಉಪಾ ಸಿಸುವವರಿಗೆ ಅಗ್ನಿಭಯ, ಜಲ ಭಯ, ಶತ್ರುಭಯ ಮುಂತಾಗಿ ಯಾವುದೂ ಕಾಡುವುದಿಲ್ಲ.



ನವರಾತ್ರಿಯ ಏಳನೆಯ ದಿನ ಸಪ್ತಮೀ ತಿಥಿಯಂದು ದೇವಿಯ ಈ ಸ್ವರೂಪದ ಆರಾಧನೆ ನಡೆಯುತ್ತದೆ. ಅಂದು ಸಾಧಕನ ಮನಸ್ಸು 'ಸಹಸ್ರಾರ' ಚಕ್ರದಲ್ಲಿ ನೆಲೆಗೊಳ್ಳುತ್ತದೆ. ಬ್ರಹ್ಮಾಂಡದ ಎಲ್ಲಾ ಸಿದ್ಧಿಗಳ ದ್ವಾರಗಳು ಅವನಿಗಾಗಿ ತೆರೆದುಕೊಳ್ಳುತ್ತವೆ. ಸಾಧಕನ ಮನಸ್ಸು ಸಂಪೂರ್ಣವಾಗಿ ಮಾತೆಯ ಸ್ವರೂಪದಲ್ಲಿ ಸ್ಥಿರವಾಗುತ್ತದೆ. ಸಮಸ್ತ ಪಾಪಗಳಿಂದ ಆತನು ಮುಕ್ತನಾಗಿ ಪುಣ್ಯಲೋಕವನ್ನು ಹೊಂದುತ್ತಾನೆ.

**೮. ಮಹಾಗೌರೀ:** ಜಗನ್ಮಾತೆ ದುರ್ಗೆಯ ಎಂಟನೆಯ ಸ್ವರೂಪ 'ಮಹಾಗೌರೀ.'

**ಶ್ವೇತೇ ವೃಷೇ ಸಮಾರೂಢಾ ಶ್ವೇತಾಂಬರಧರಾ ಶುಚಿಃ ।**
**ಮಹಾಗೌರೀ ಶುಭಂ ದದ್ಯಾತ್ ಮಹಾದೇವ ಪ್ರಮೋದದಾ ॥**

ಈ ದೇವಿಯು ಶ್ವೇತವರ್ಣವನ್ನು ಹೊಂದಿರುವಳು. ಈಕೆಯ ವಸ್ತ್ರ ಹಾಗೂ ಆಭರಣಗಳೆಲ್ಲವೂ ಶ್ವೇತವರ್ಣದಿಂದ ಕೂಡಿರುವುವು. ಎಂಟು ವರ್ಷದ ಕನ್ಯೆ ಇವಳು. ನಾಲ್ಕು ಭುಜಗಳನ್ನು ಹೊಂದಿರುವಳು. ಮೇಲಿನ ಬಲಹಸ್ತ ಅಭಯಮುದ್ರೆಯಲ್ಲಿರುವುದು. ಕೆಳಗಿನ ಬಲಹಸ್ತದಲ್ಲಿ ತ್ರಿಶೂಲವಿರುವುದು. ಮೇಲಿನ ಎಡಹಸ್ತದಲ್ಲಿ ಡಮರು ಹಾಗೂ ಕೆಳಗಿನ ಎಡಹಸ್ತ ವರ ಮುದ್ರೆ. ಅತ್ಯಂತ ಶಾಂತ ಸ್ವರೂಪ ಈಕೆಯದು. ವೃಷಭವನ್ನು ವಾಹನವನ್ನಾಗಿ ಹೊಂದಿರುವಳು.

ಮಹಾಗೌರಿಯ ಪೂಜೆ, ಧ್ಯಾನ, ಇವುಗಳಿಂದ ಸಮಸ್ತ ಶ್ರೇಯಸ್ಸು ಉಂಟಾಗುವುದು. ಅಲೌಕಿಕ ಸಿದ್ಧಿಗಳು ಪ್ರಾಪ್ತವಾಗುವವು.

ನವರಾತ್ರಿಯ ಎಂಟನೆಯ ದಿನ ಅಷ್ಟಮಿಯಂದು ಈ ದೇವಿಯ ಪೂಜೆ ನಡೆಯುತ್ತದೆ. ಈಕೆಯ ಶಕ್ತಿ ಅಮೋಘವಾದುದು ಹಾಗೂ ಕ್ಷಿಪ್ರ ಫಲವನ್ನು ದಯಪಾಲಿಸುವುದು. ಭಕ್ತರ ಎಲ್ಲ ಪಾಪಗಳೂ ದೂರವಾಗಿ ಅಪಾರ ಪುಣ್ಯ ಪ್ರಾಪ್ತಿಯಾಗುತ್ತದೆ.

**೯. ಸಿದ್ಧಿಧಾತ್ರಿ:** ಜಗನ್ಮಾತೆಯ ಒಂಬತ್ತನೇ ಸ್ವರೂಪವೇ 'ಸಿದ್ಧಿಧಾತ್ರಿ.'

**ಸಿದ್ಧಗಂಧರ್ವಯಕ್ಷಾದ್ಯೈಃ ಅಸುರೈರಮರೈರಪಿ ।**
**ಸೇವ್ಯಮಾನಾ ಸದಾ ಭೂಯಾತ್ ಸಿದ್ಧಿದಾ ಸಿದ್ಧಿದಾಯಿನೀ ॥**

ಎಲ್ಲ ವಿಧವಾದ ಸಿದ್ಧಿಗಳನ್ನು ನೀಡುವವಳು ಈಕೆ. *ಬ್ರಹ್ಮ ವೈವರ್ತ ಪುರಾಣ* ದ ಶ್ರೀಕೃಷ್ಣ ಜನ್ಮಖಂಡದಲ್ಲಿ ಸಿದ್ಧಿಗಳು ೧೮ ಎನ್ನಲಾಗಿದೆ. ಅವು ಹೀಗಿವೆ:

೧. ಅಣಿಮಾ ೨. ಲಘಿಮಾ ೩. ಪ್ರಾಪ್ತಿ ೪. ಪ್ರಾಕಾಮ್ಯ ೫. ಮಹಿಮಾ ೬. ಈಶ್ವರವಶಿತ್ವ ೭. ಸರ್ವಕಾಮಾವಸಾಯಿತಾ ೮. ಸರ್ವಜ್ಞತ್ವ ೯. ದೂರಶ್ರವಣ ೧೦. ಪರಕಾಯಪ್ರವೇಶ ೧೧. ವಾಕ್‌ಸಿದ್ಧಿ ೧೨. ಕಲ್ಪವೃಕ್ಷತ್ವ ೧೩. ಸೃಷ್ಟಿ ೧೪. ಸಂಹಾರಕರಣ ೧೫. ಅಮರತ್ವ ೧೬. ಸರ್ವನ್ಯಾಯಕತ್ವ ೧೭. ಭಾವನಾ ೧೮. ಸಿದ್ಧಿ.

ಸಾಧಕರಿಗೆ ಈ ಎಲ್ಲಾ ಸಿದ್ಧಿಗಳನ್ನು ಅನುಗ್ರಹಿಸುವವಳು ಸಿದ್ಧಿಧಾತ್ರಿ. ಶಿವನೂ ಸಹ ಈಕೆಯ ಕೃಪೆಯಿಂದಲೇ ಸಮಸ್ತ ಸಿದ್ಧಿಗಳನ್ನು ಪಡೆದನೆಂದು *ದೇವೀ ಪುರಾಣ* ದಲ್ಲಿ ವರ್ಣಿಸಲಾಗಿದೆ. ಈಕೆಯು ನಾಲ್ಕು ಭುಜಗಳನ್ನು ಹೊಂದಿರುವಳು. ಕೆಳಗಿನ ಬಲಹಸ್ತದಲ್ಲಿ ಚಕ್ರ, ಮೇಲಿನ ಬಲಹಸ್ತದಲ್ಲಿ ಕಮಲವನ್ನು ಹಿಡಿದಿರುವಳು. ಈಕೆಯ ವಾಹನ ಸಿಂಹ. ಕಮಲ ಪುಷ್ಪದ ಮೇಲೂ ಕುಳಿತಿರುವುದುಂಟು.



ನಿರಂತರವಾಗಿ ದೇವಿಯ ಈ ಸ್ವರೂಪದ ಆರಾಧನೆ ಮಾಡುವ ಸಾಧಕನು ನಿರ್ಲಿಪ್ತನಾಗಿ ಸಂಸಾರದ ಎಲ್ಲಾ ಸುಖಗಳನ್ನೂ ಅನುಭವಿಸಿ ಮೋಕ್ಷವನ್ನು ಹೊಂದುತ್ತಾನೆ.

ನವರಾತ್ರಿಯ ಒಂಬತ್ತನೆಯ ದಿನ ಅಂದರೆ ನವಮಿ ತಿಥಿಯಂದು ಭಗವತಿಯ ಈ ಸ್ವರೂಪದ ಪೂಜೆ. ಈ ದಿನ ಶಾಸ್ತ್ರೀಯ ವಿಧಿಗಳಿಂದ, ಶ್ರದ್ಧೆಯಿಂದ ಸಾಧನೆ ಮಾಡುವ ಸಾಧಕರಿಗೆ ಸಮಸ್ತ ಸಿದ್ಧಿಗಳೂ ಪ್ರಾಪ್ತವಾಗುತ್ತವೆ.

ದುರ್ಗೆಯ ಕೊನೆಯ ಸ್ವರೂಪ 'ಸಿದ್ಧಿಧಾತ್ರಿ.' ನವರಾತ್ರಿಯ ಎಂಟು ದಿನಗಳ ಕಾಲ ಎಂಟು ದುರ್ಗೆಯರ ಪೂಜೆಯನ್ನು ಶಾಸ್ತ್ರೋಕ್ತವಾಗಿ ಆಚರಿಸಿ, ಒಂಬತ್ತನೆಯ ದಿನ ಈಕೆಯನ್ನು ಉಪಾಸಿಸಬೇಕು. ಈ ಸಿದ್ಧಿಧಾತ್ರಿ ದೇವಿಯನ್ನು ಸೂಕ್ತವಾಗಿ ಅರ್ಚಿಸಿದ ಭಕ್ತರ, ಸಾಧಕರ ಲೌಕಿಕ-ಅಲೌಕಿಕ ಬಯಕೆಗಳೆಲ್ಲವೂ ಈಡೇರುತ್ತದೆ. ಭಗವತಿಯ ಪರಮ ಸಾನ್ನಿಧ್ಯ ದೊರಕುತ್ತದೆ. ಜನ್ಮ ಸಾರ್ಥಕವಾಗುತ್ತದೆ. ಯಾವ ಅಪೇಕ್ಷೆಗಳೂ ಉಳಿಯದೆ ಪರಮ ಶಾಂತಿಯನ್ನು ಆತ ಅನುಭವಿಸುತ್ತಾನೆ.

ಹೀಗೆ ಪರಬ್ರಹ್ಮ ಸ್ವರೂಪಿಣಿಯಾದ ಜಗನ್ಮಾತೆಯು ಭಕ್ತರ ಉದ್ಧಾರಕ್ಕಾಗಿ ಹಲವಾರು ರೂಪಗಳನ್ನು ತಾಳಿ ಅವರನ್ನು ಉದ್ಧರಿಸುವಳು. ಅತ್ಯಂತ ಸುಲಭವಾದ ಭಕ್ತಿಮಾರ್ಗದಿಂದ ಮುಕ್ತಿಯೆಡೆಗೆ ಸಾಗುವ ದಾರಿಯನ್ನು ಆಕೆಯೇ ತೋರಿಸುವಳು. ಜಗನ್ಮಾತೆಗೆ ಸಂಪೂರ್ಣ ಶರಣಾದ ಭಕ್ತರ ಯೋಗಕ್ಷೇಮವು ಆಕೆಗೇ ಸೇರಿದ್ದು. ಅಂತಹ ಜಗನ್ಮಾತೆಯ ಕೃಪೆಯಿಂದ ಜಗತ್ತೆಲ್ಲವೂ ಸುಖ- ಶಾಂತಿಯನ್ನು ಅನುಭವಿಸುತ್ತಾ ನೆಮ್ಮದಿಯಿಂದ ಬಾಳುವಂತಾಗಲಿ. ❀



# ಇಂದಿನ ಶೈಕ್ಷಣಿಕ ಸನ್ನಿವೇಶದಲ್ಲಿ ವಿದ್ಯಾರ್ಥಿಯ ಮುಂದಿರುವ ಸವಾಲುಗಳು

## - ಒಂದು ಪರಿಶೀಲನೆ -

- ಡಾ. ಹೆಚ್.ಎನ್.ಮುರಳೀಧರ

ಒಂದು ಜನಾಂಗವನ್ನು ರೂಪಿಸುವಲ್ಲಿ ಶಿಕ್ಷಣ ಹಾಗೂ ಶಿಕ್ಷಕರು ವಹಿಸುವ ಪಾತ್ರ ಅತ್ಯಂತ ಮುಖ್ಯವಾದುದು. ಆಧುನಿಕ ಸನ್ನಿವೇಶದಲ್ಲಿ ಶಿಕ್ಷಣ ಕ್ಷೇತ್ರವು ಎದುರಿಸಬೇಕಾಗಿ ಬಂದಿರುವ ಸವಾಲುಗಳು ಹಾಗೂ ಅವುಗಳಿಗೆ ಪರಿಹಾರ - ಈ ವಿಷಯವನ್ನು ಕುರಿತು ಚಿಂತಿಸುವ ಲೇಖಕರು ನಿವೃತ್ತ ಕನ್ನಡ ಪ್ರಾಧ್ಯಾಪಕರು. ಉತ್ತಮ ವಾಗ್ಮಿಗಳು ಹಾಗೂ ಲೇಖಕರಾಗಿರುವ ಅವರು ಅನೇಕ ಕನ್ನಡ ಕೃತಿಗಳನ್ನು ರಚಿಸಿದ್ದಾರೆ. ಅವರು ಬೆಂಗಳೂರು ರಾಮಕೃಷ್ಣ ಮಠದ ಭಕ್ತರು.

ಸಮಕಾಲೀನ ಶೈಕ್ಷಣಿಕ ಸನ್ನಿವೇಶದ ಸ್ವರೂಪ ಅತ್ಯಂತ ಸಂಕೀರ್ಣವಾಗುತ್ತಿರುವುದನ್ನು ನಾವೆಲ್ಲ ಗಮನಿಸುತ್ತಿದ್ದೇವೆ. ಶಿಕ್ಷಣದ ಸಾಮಾಜಿಕ ಮುಖಗಳು ನಮಗೆಲ್ಲ ತಿಳಿದಿರುವಂಥವೇ ಆಗಿವೆ. ರಾಜಕೀಯದ ಆಗುಹೋಗುಗಳೊಂದಿಗೂ ಶಿಕ್ಷಣ ನೇರವಾದ ಸಂಬಂಧವನ್ನು ಏರ್ಪಡಿಸಿಕೊಳ್ಳುತ್ತಿದೆ. ಇನ್ನೊಂದೆಡೆ ಅದಕ್ಕೊಂದು ಉದ್ಯಮದ ಸ್ವರೂಪವೇ ಬಂದಂತಾಗಿದ್ದು ಬಂಡವಾಳ ಹೂಡಿಕೆಯ ಕ್ಷೇತ್ರವಾಗಿಯೂ ಪರಿಣಮಿಸಿದೆ. ಹೀಗಿರುವಾಗ ಶಿಕ್ಷಣವೆಂಬ ವ್ಯವಸ್ಥೆಯ (Establishment) ಮೂಲಭೂತ ಫಲಾನುಭವಿಯೂ ಕೇಂದ್ರವೂ ಆಗಿರಬೇಕಾದ ವಿದ್ಯಾರ್ಥಿಯೆಂಬ ಘಟಕದ ಮೇಲೆ ಈ ಎಲ್ಲ ಸಂಗತಿಗಳು ಉಂಟುಮಾಡುತ್ತಿರುವ ಪರಿಣಾಮಗಳ ಬಗೆಗೆ ಆಲೋಚಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಇಂದಿನ ವಿದ್ಯಾರ್ಥಿಯ ಮುಂದಿರುವ ಸವಾಲುಗಳನ್ನು ಸಂಕ್ಷಿಪ್ತವಾಗಿ ಪರಿಶೀಲಿಸುವುದು ಈ ಬರಹದ ಉದ್ದೇಶ.

'ವಿದ್ಯಾರ್ಥಿ' ಎಂಬ ಪದದ ಮೂಲದಲ್ಲಿ 'ವಿದ್ಯೆ' ಎಂಬ ಶಬ್ದವಿದೆ. ಇಂದು ಬಹಳಷ್ಟು ಸಲ 'ವಿದ್ಯೆ' ಮತ್ತು 'ಶಿಕ್ಷಣ' ಎಂಬ ಎರಡೂ ಪದಗಳನ್ನು ಸಮಾನಾರ್ಥಕಗಳಾಗಿ ಬಳಸುವುದುಂಟು (ಉದಾ: ವಿದ್ಯಾಲಯ, ಶಿಕ್ಷಣ ಕೇಂದ್ರ). ಆದರೆ ಇವೆರಡರ ನಡುವೆ ಸೂಕ್ಷ್ಮವಾದ ವ್ಯತ್ಯಾಸವಿರುವುದನ್ನು ಗಮನಿಸದಿರುವಂತಿಲ್ಲ. ವಿದ್ಯೆ ಎನ್ನುವುದು ಪ್ರಾಥಮಿಕವಾಗಿ ಏನಾದರೊಂದನ್ನು ಮಾಡಬಲ್ಲ ಸಾಮರ್ಥ್ಯ (competence to perform). ಅದು ಕೇವಲ ತಿಳಿವಳಿಕೆಯಲ್ಲ; ಅದು ಆಗುವಿಕೆ. ಅದು ವ್ಯಕ್ತಿಯ ಅಸ್ತಿತ್ವದಲ್ಲಿ ಬದಲಾವಣೆಯನ್ನು ತರಬಲ್ಲ ಸಂಗತಿ. ಇದಕ್ಕೆ ಪೂರಕವಾದ ತರಬೇತಿ ಶಿಕ್ಷಣ. ಈ ದೃಷ್ಟಿಯಿಂದ ವಿದ್ಯೆ ಗುರಿಯಾದರೆ ಶಿಕ್ಷಣ ದಾರಿ. ಶಿಕ್ಷಣವೆಂಬ ಸಾಧನದ ಮೂಲಕ ವಿದ್ಯೆಯನ್ನು ಸಿದ್ಧಿಸಿಕೊಳ್ಳಬೇಕಾಗುತ್ತದೆ. ಶಿಕ್ಷಣಕ್ಕೆ ಬಹಿರಂಗದ ಆಯಾಮಗಳುಂಟು. ಆದರೆ ವಿದ್ಯೆ ಮೂಲಭೂತವಾಗಿ ಆಂತರ್ಯದಲ್ಲಿ ನೆಲೆಗೊಳ್ಳುವಂಥದು. ಈ ಹಿನ್ನೆಲೆಯಲ್ಲಿ ವಿದ್ಯಾರ್ಥಿಯ ಗುರಿ ಹಾಗೂ ದಾರಿಗಳ ಬಗೆಗೆ ಆಲೋಚಿಸಬೇಕಾದ ಅಗತ್ಯವಿದೆ.

ಇಲ್ಲಿ ಒಂದು ಸಂಗತಿಯಂತೂ ಸ್ಪಷ್ಟವಾಗುತ್ತದೆ. ಅದೇ, ಶಿಕ್ಷಣವೆನ್ನುವುದು 'ಆಯ್ಕೆ'ಗೆ ಸಂಬಂಧಿಸಿದುದು ಎನ್ನುವುದು. ಅದೊಂದು ಪ್ರಜ್ಞಾಪೂರ್ವಕವಾದ ವೈಯಕ್ತಿಕ ಕ್ರಿಯೆ. ಅದು ವ್ಯಕ್ತಿಯ ಏಕಾಂತದಲ್ಲಿ ಸಂಭವಿಸುವಂಥದೇ ಹೊರತು ಸಮುದಾಯದ ಭಾಗವಾಗಿ ಏರ್ಪಡುವಂಥದಲ್ಲ. ತನ್ನ ಸ್ವರೂಪ ವೈಶಿಷ್ಟ್ಯವನ್ನು, ಅನನ್ಯತೆಯನ್ನು ಅರ್ಥಮಾಡಿಕೊಳ್ಳುವುದು ಮತ್ತು ಅದರ ವಿಕಸನ ಪ್ರಕ್ರಿಯೆಯನ್ನು ಗ್ರಹಿಸುವುದು ಇಲ್ಲಿ ಮುಖ್ಯವಾಗುತ್ತದೆ. ಹೀಗಾಗಿ ಇದು ತನ್ನನ್ನು ತಾನು ಶೋಧಿಸಿಕೊಳ್ಳುವ ಸಂಗತಿಯೂ ಹೌದು. ಈ ಶೋಧನೆಯ ಆಯಾಮವೇ ವಿದ್ಯಾರ್ಜನೆಗೊಂದು ಗತಿಯನ್ನೂ ಸ್ಥಿತಿಯನ್ನೂ ತಂದುಕೊಡುವಂಥದು.

ಈ ದೃಷ್ಟಿಯ ಮುಂದುವರಿಕೆಯಾಗಿ ಗುರುತಿಸಿಕೊಳ್ಳಬಹುದಾದ ಒಂದು ವಿಚಾರವೆಂದರೆ ವಿದ್ಯೆಯ ಪಾತ್ರ ದ್ವಿಮುಖವಾದುದು ಎನ್ನುವುದು. ಒಂದು ಕಡೆಯಿಂದ ಅದು ವ್ಯಕ್ತಿಯ ಅಸ್ಮಿತೆಯನ್ನೂ ಅನನ್ಯತೆಯನ್ನೂ ಗುರುತಿಸಿ ಆಂತರ್ಯದ ಸಾರವು ಅಭಿವ್ಯಕ್ತವಾಗಲು ಅವಕಾಶವನ್ನು ಮಾಡಿಕೊಡುತ್ತದೆ. ಇನ್ನೊಂದೆಡೆಯಿಂದ ಸಮುದಾಯದೊಂದಿಗಿನ ವ್ಯಕ್ತಿಯ ಸಂಬಂಧ ಸಾರ್ಥಕವಾಗಲೂ ನೆರವಾಗುತ್ತದೆ. ಇದನ್ನು ಇನ್ನೊಂದು ರೀತಿಯಿಂದಲೂ ವಿವರಿಸಬಹುದು. ಒಬ್ಬ ವ್ಯಕ್ತಿ ವಿದ್ಯಾವಂತನಾಗುವುದೆಂದರೆ ಸಮುದಾಯದ ಸಂದರ್ಭದಲ್ಲಿ ತನ್ನ ಅಸ್ತಿತ್ವದ ಸ್ವರೂಪವೇನು ಎಂಬುದನ್ನು ಅರ್ಥಮಾಡಿಕೊಂಡು, ತನ್ನ ಹಾಗೂ ಸಮುದಾಯದ ನಡುವಣ ಕೊಡುಕೊಳುಗೆ ಪರಸ್ಪರ ಸಾರ್ಥಕವಾಗುವಂತೆ ನೋಡಿಕೊಳ್ಳುವುದು. ''ಕೋಟಿಕೋಟಿ ಜನರು ಅಜ್ಞಾನ-ದಾರಿದ್ರ್ಯಗಳಲ್ಲಿ ನರಳುತ್ತಿರುವವರೆಗೂ ನಾನು ಪ್ರತಿಯೊಬ್ಬನನ್ನೂ - ಆ ಬಡಬಗ್ಗರದನ್ನು ಕಸಿದುಕೊಂಡು ವಿದ್ಯಾವಂತನಾಗಿದ್ದರೂ ಅವರೆಡೆಗೆ ಕಿಂಚಿತ್ತೂ ಲಕ್ಷ್ಯ ಕೊಡದವನನ್ನು - ದೇಶದ್ರೋಹಿಯೆಂದು ಕರೆಯುತ್ತೇನೆ'' ಎಂದು ಸ್ವಾಮಿ ವಿವೇಕಾನಂದರು ಹೇಳಿದಾಗ, ಆ ಮಾತುಗಳ ಹಿನ್ನೆಲೆಯಲ್ಲಿ ಈ ಆಲೋಚನೆಯಿರುವುದನ್ನು ಗುರುತಿಸಬಹುದು. ಹೀಗಾಗಿ ವ್ಯಕ್ತಿಯ ವಿದ್ಯಾರ್ಜನೆಯಲ್ಲಿ ವ್ಯಕ್ತಿಗತ ಉನ್ನತಿಯೂ ಸಾಮುದಾಯಿಕ ಏಳಿಗೆಯೂ ಪರಸ್ಪರ ಹೆಣೆದುಕೊಂಡಿವೆ. **'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** ('ತನ್ನ ಮುಕ್ತಿಗಾಗಿ ಹಾಗೂ ಸಮಾಜದ ಹಿತಕ್ಕಾಗಿ') ಎಂಬ ಸ್ವಾಮಿ ವಿವೇಕಾನಂದರ ಧ್ಯೇಯಮಂತ್ರ ಯಥೋಚಿತವಾಗಿ ಈ ಸಂದರ್ಭಕ್ಕೂ ಅನ್ವಯವಾಗುತ್ತದೆ.

ಇಷ್ಟು ವಿಚಾರಗಳ ಹಿನ್ನೆಲೆಯಲ್ಲಿ ಒಂದು ಮುಖ್ಯವಾದ ಪ್ರಶ್ನೆಯನ್ನು ನಾವು ಕೈಗೆತ್ತಿಕೊಳ್ಳಬೇಕು. ಈ ಮೇಲೆ ಹೇಳಿದ ಆದರ್ಶ-ಅಪೇಕ್ಷೆಗಳಿಗೆ ಅನುಗುಣವಾದ ಆಯ್ಕೆಗಳನ್ನು ನಮ್ಮ ಶೈಕ್ಷಣಿಕ ಸನ್ನಿವೇಶ ವಿದ್ಯಾರ್ಥಿಗಳ ಮುಂದೆ ಇಡುತ್ತಿದೆಯೇ ಎನ್ನುವುದೇ ಆ ಪ್ರಶ್ನೆ. ಪ್ರಸ್ತುತ ಶೈಕ್ಷಣಿಕ ಸನ್ನಿವೇಶದ ವಾಸ್ತವಗಳನ್ನು ಗಮನಿಸಿದರೆ ಇದಕ್ಕೆ ಹೆಚ್ಚಾಗಿ 'ಇಲ್ಲ' ಎಂಬ ಉತ್ತರವನ್ನೇ ನೀಡಬೇಕಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಮಕ್ಕಳ ಭವಿಷ್ಯವನ್ನು ನಿರ್ಧರಿಸುವವರು ಪೋಷಕರು ಎಂಬ ಅಭಿಪ್ರಾಯವೊಂದು ಚಾಲ್ತಿಯಲ್ಲಿರುವುದಷ್ಟೆ? ಹೆಚ್ಚಿನ ಪೋಷಕರಿಗೆ ಮಕ್ಕಳ ವಿದ್ಯಾಭ್ಯಾಸವೆನ್ನುವುದು ಹೂಡುವ ಬಂಡವಾಳ ಮತ್ತು ಪಡೆಯುವ ಲಾಭದ ಪ್ರಕ್ರಿಯೆಯಾಗಿ ಪರಿಣಮಿಸಿದೆ. ಇದಕ್ಕೆ ಪೂರಕವಾಗಿ ಎಂಬಂತೆ ನಮ್ಮ ನಡುವಿನ ಹೆಚ್ಚಿನ ಶಿಕ್ಷಣಸಂಸ್ಥೆಗಳು ಪಾಠದ ಅಂಗಡಿಗಳಾಗಿ ವಾಸ್ತವವಾದಷ್ಟು ವ್ಯಕ್ತಿತ್ವ ವಿಕಸನದ ಕೇಂದ್ರಗಳಾಗಿ ಸಾರ್ಥಕವಾಗುತ್ತಿಲ್ಲ. ನಮ್ಮ ಸಮುದಾಯದಲ್ಲಿ ಅಧ್ಯಯನ ವಿಷಯಗಳ ನಡುವೆ ಏರ್ಪಟ್ಟಿರುವ ಶ್ರೇಣೀಕರಣ ಈ ಮಾತಿಗೆ ಪುರಾವೆಯನ್ನೊದಗಿಸುತ್ತದೆ. ಈ ದೃಷ್ಟಿಯಿಂದ ನಮ್ಮ ವಿದ್ಯಾರ್ಥಿಗಳೆಂಬುವರು ಹೆಚ್ಚಾಗಿ ಅರ್ಥಾರ್ಥಿಗಳೂ ಅದಕ್ಕೆ ಪೂರಕವಾಗಿ ಶಿಕ್ಷಣಾರ್ಥಿಗಳೂ ಆಗುವ ಸನ್ನಿವೇಶ ನಿರ್ಮಾಣವಾಗಿದೆ. ಬಡವರ್ಗಕ್ಕೆ, ಮಧ್ಯಮವರ್ಗಕ್ಕೆ ಶಿಕ್ಷಣವೆನ್ನುವುದು ಆರ್ಥಿಕ ಸ್ವಾವಲಂಬನೆಯ ದಾರಿಯನ್ನು ತೆರೆಯಿತೆಂಬುದನ್ನು ನಾವಿಲ್ಲಿ ಮರೆಯುವಂತಿಲ್ಲ. ಇಷ್ಟಾದರೂ ಶಿಕ್ಷಣವು ಗಳಿಕೆಯ ಸಾಧನವಾಗಿ ವಾಸ್ತವವಾದಷ್ಟು ಅರಿಯುವ ಸಾಧನವಾಗಿ ವಾಸ್ತವವಾಗುತ್ತಿಲ್ಲ ಎನ್ನುವುದು ಯೋಚಿಸಬೇಕಾದ ಸಂಗತಿ.

ಶಿಕ್ಷಣಕ್ಕೆ ಸಂಬಂಧಿಸಿದಂತೆ ಒಟ್ಟಾರೆಯಾಗಿ ಸಮಾಜದ ಚಿಂತನೆಯೂ ಒಂದು ಬಗೆಯ ಗೊಂದಲದಲ್ಲಿರುವಂತಿದೆ. ಶಿಕ್ಷಣವು ಉತ್ತಮ ವ್ಯಕ್ತಿಗಳನ್ನು, ಉತ್ತಮ ಸಮಾಜವನ್ನು ನಿರ್ಮಾಣ ಮಾಡುವುದಕ್ಕೆ ನೆರವಾಗಬೇಕು ಎನ್ನುವುದು ಸಾಮಾನ್ಯವಾಗಿ ಎಲ್ಲರ ಅಪೇಕ್ಷೆಯ ಮಾತು. ಆದರೆ ನಾವು ನಿರ್ಮಿಸಿಕೊಂಡಿರುವ ಶೈಕ್ಷಣಿಕ ಸನ್ನಿವೇಶ ಮಾತ್ರ ವಿದ್ಯಾರ್ಥಿಗಳ ವ್ಯಕ್ತಿಗತ ಚಹರೆಗಳನ್ನು ಇಲ್ಲವಾಗಿಸಿ ಅವರನ್ನು ಗುಂಪಿನ ಭಾಗವಾಗಿ ಮಾಡುವುದರ ಕಡೆಗೆ ಹೆಚ್ಚಿನ ಒತ್ತಡವನ್ನು ಹಾಕುತ್ತದೆ. ಸೃಜನಶೀಲತೆಗಿಂತ ಹೆಚ್ಚಾಗಿ ಪುನರುಕ್ತಿ-ಪುನರಾವರ್ತನೆಗಳನ್ನೇ ಮನ್ನಿಸುವ ವ್ಯವಸ್ಥೆ ಇದಕ್ಕೆ ಪೂರಕವಾಗಿ ದುಡಿಯುತ್ತಿದೆ. ಇದರ ಪರಿಣಾಮವಾಗಿ ವಿಮರ್ಶಾತ್ಮಕ ವಿವೇಚನೆಯಿಲ್ಲದ, ಕಲಾತ್ಮಕ ಸಂವೇದನೆಯಿಂದ ಹೊರತಾದ, ಗ್ರಾಹಕ ಮಾರುಕಟ್ಟೆಗೆ ಮಾತ್ರ ಉಪಯುಕ್ತವಾಗಬಲ್ಲ ದುಡಿಯುವ ಪದವೀಧರ ವರ್ಗವೊಂದನ್ನು ನಾವು ನಿರ್ಮಾಣ ಮಾಡುತ್ತಿದ್ದೇವೆ. ಇದರಿಂದ ರಾಷ್ಟ್ರೀಯ ಹಬ್ಬಗಳನ್ನೂ ಮತದಾನದ ದಿನಗಳನ್ನೂ ವಿರಾಮವೆಂದು ಪರಿಗಣಿಸುವ, ವಾರಾಂತ್ಯದ ಬಿಡುವನ್ನು ಮೋಜಿನ ವಿಹಾರ ಅಥವಾ ಕೊಳ್ಳುವ ಉತ್ಸವಗಳಾಗಿ ಮೀಸಲಿಡುವ ವಿಶಿಷ್ಟ ಸಮುದಾಯವೊಂದು ಸೃಷ್ಟಿಯಾಗುತ್ತಿದೆ. ಓದುಬಲ್ಲವರಾಗಿಯೂ ಓದುಬಲ್ಲವರಾಗಿರದ ಈ ಅಕ್ಷರವರ್ಗ ನಮ್ಮ ಸಾಂಸ್ಕೃತಿಕ ಸಂದರ್ಭದ ಪ್ರಶ್ನೆಯಾಗಿ ಪರಿಣಮಿಸಿದೆ.

ಸಮಾಜದ ಅಸ್ತಿತ್ವ ಜೈವಿಕವಾದುದೇ ಹೊರತು ಯಾಂತ್ರಿಕವಾದುದಲ್ಲ. ಅದಕ್ಕೆ ಸಾವಿರ ಶಿರಗಳು, ಸಾವಿರ ಕಣ್ಣುಗಳು, ಸಾವಿರ ಕೈಗಳು, ಸಾವಿರ ಕಾಲುಗಳು. ಈ ಬಹುಮುಖತೆಯೇ ಅದರ ಜೀವಂತಿಕೆಯ ಆಧಾರ. ಸಾಹಿತ್ಯ, ಸಂಗೀತ, ನೃತ್ಯ, ಕ್ರೀಡೆ ಎಲ್ಲಕ್ಕೂ ಅಲ್ಲಿ ಸ್ಥಾನವುಂಟು. ಡಾಕ್ಟರುಗಳು, ಇಂಜಿನಿಯರುಗಳಂತೆಯೇ ಸಮಾಜವು ಮನಶ್ಶಾಸ್ತ್ರಜ್ಞರು, ರಾಜ್ಯಶಾಸ್ತ್ರಜ್ಞರು, ಸಮಾಜ ಶಾಸ್ತ್ರಜ್ಞರು, ಅರ್ಥಶಾಸ್ತ್ರಪರಿಣಿತರು, ಸಾಹಿತಿಗಳು ಮೊದಲಾದವರಿಂದಲೂ ಸಂಪನ್ನವಾದಾಗ ಮಾತ್ರ ಅದು ಸಕಲಾಂಗಗಳನ್ನು ಕೂಡಿಸಿಕೊಳ್ಳಬಹುದೇ ಹೊರತು ಇವಿಲ್ಲದಿದ್ದಾಗ ಅದು ಅಂಗವೈಕಲ್ಯದಿಂದ ನರಳುವಂತಾಗುತ್ತದೆ. ಇಂದಿನ ವಿದ್ಯಾರ್ಥಿಯ ಮುಂದೆ ಈ ಗ್ರಹಿಕೆ, ಈ ಪರಿಪ್ರೇಕ್ಷ್ಯ (perspective) ಇದ್ದಾಗ ಮಾತ್ರ ಆತನ ಆಯ್ಕೆ, ಪ್ರಯತ್ನಗಳಿಗೆ ಸಾರ್ಥಕತೆಯ ಆಯಾಮ ದೊರೆಯಬಲ್ಲದು. ಆಗ ಮಾತ್ರ ಆತ ಹಲವು ಜನರು ಸಾಗುವ ಹಾದಿಯಲ್ಲಿ ಕುರುಡುತನದಿಂದ ಸಾಗದೆ ತನ್ನತನದ ವಿಶಿಷ್ಟ ಅಭಿವ್ಯಕ್ತಿಗೆ ಕಣ್ತೆರೆಯುವಂತಾಗುತ್ತದೆ. ವ್ಯಕ್ತಿಗತ ವಿಕಾಸವನ್ನು ಕಡೆಗಣಿಸಿ ಕೇವಲ ಬೌದ್ಧಿಕ ಪ್ರಗತಿಯನ್ನು ವಿಜೃಂಭಿಸುವ ಜ್ಞಾನ ಪ್ರಕ್ರಿಯೆಯ ಬಗೆಗೆ ಸ್ವಾಮಿ ವಿವೇಕಾನಂದರು ಹೇಳಿರುವ ಮಾತುಗಳು ಗಮನೀಯವಾಗಿವೆ:

''ಬುದ್ಧಿಯ ಸಂಸ್ಕರಣದಿಂದ ನೂರಾರು ವಿಜ್ಞಾನಗಳನ್ನು ಕಂಡುಹಿಡಿಯಲಾಗಿದೆ. ಇದರಿಂದ ಆಗಿರುವ ಒಂದೇ ಒಂದು

‘ಸತ್ಪರಿಣಾಮ’ವೆಂದರೆ ಕೆಲವರು ಹಲವರನ್ನು ಗುಲಾಮರನ್ನಾಗಿ ಮಾಡಿಕೊಳ್ಳುವಂತಾಗಿದ್ದು. ಕೃತಕ ಅಗತ್ಯಗಳನ್ನು ಸೃಷ್ಟಿಸಲಾಗುತ್ತಿದೆ. ಇದರಿಂದ ಪ್ರತಿಯೊಬ್ಬ ಬಡ ಮನುಷ್ಯನೂ ಕೂಡ, ಅವನ ಬಳಿ ಹಣ ಇರಲಿ ಇಲ್ಲದಿರಲಿ, ಈ ಅಗತ್ಯಗಳನ್ನು ಪೂರೈಸಿಕೊಳ್ಳಲು ಬಯಸಿ, ಹೆಣಗಿ ಹೆಣಗಿ ಸಾಯುತ್ತಾನೆ. ಆಗುತ್ತಿರುವ ಪರಿಣಾಮ ಇದೇ. ಸಂಕಟದ ಸಮಸ್ಯೆಗೆ ಬುದ್ಧಿ ಪರಿಹಾರವಲ್ಲ. ಅದನ್ನು ಹೃದಯದಿಂದ ಸಾಧಿಸಬೇಕು. ಈ ಬೌದ್ಧಿಕ ವಿದ್ಯೆಯ ಹಿಂದಿರುವ ಅಗಾಧ ಪ್ರಯತ್ನವನ್ನು ನಾವು ಮನುಷ್ಯನನ್ನು ಇನ್ನಷ್ಟು ಪರಿಶುದ್ಧನನ್ನಾಗಿ, ಸುಸಂಸ್ಕೃತನನ್ನಾಗಿ, ಇನ್ನಷ್ಟು ಸಹನಶೀಲನನ್ನಾಗಿ ಮಾಡುವುದರ ಕಡೆಗೆ ತೊಡಗಿಸಿದ್ದರೆ ಆಗ ಪ್ರಪಂಚ ಈಗಿರುವದಕ್ಕಿಂತ ಸಾವಿರ ಪಾಲು ಸಂತೋಷದಿಂದಿರುತ್ತಿತ್ತು...’’

ಅವರು ಮತ್ತೆ ಹೇಳುತ್ತಾರೆ:

‘‘ನಿಮ್ಮ ಪಾಶ್ಚಾತ್ಯ ನಾಗರಿಕತೆಯ ಕೆಡುಕುಗಳಲ್ಲಿ ಒಂದೆಂದರೆ ನೀವು ಕೇವಲ ಬೌದ್ಧಿಕ ಶಿಕ್ಷಣಕ್ಕೆ ಪ್ರಾಧಾನ್ಯವನ್ನು ನೀಡಿ ಹೃದಯದ ಸಂಸ್ಕರಣವನ್ನು ಕಡೆಗಣಿಸುತ್ತೀರಿ. ಇದು ಮನುಷ್ಯನನ್ನು ಇನ್ನಷ್ಟು, ಮತ್ತಷ್ಟು ಸ್ವಾರ್ಥಿಯನ್ನಾಗಿ ಮಾಡುತ್ತದೆ.’’

ಈ ಎಲ್ಲ ಮಾತುಗಳ ಉದ್ದೇಶವಿಷ್ಟೆ: ಇಂದು ‘ವಿದ್ಯಾರ್ಥಿ’ಯ ಮುಂದೆ – ‘ವಿದ್ಯೆಯನ್ನು ಬಯಸುವವನ’ ಮುಂದೆ – ಹಲವು ಸವಾಲುಗಳಿವೆ. ಬಹುಸಂಖ್ಯಾತರು ಕೊಚ್ಚಿಕೊಂಡು ಹೋಗುತ್ತಿರುವ ಶಿಕ್ಷಣವೆಂಬ ಹುಚ್ಚುಹೊಳೆಯಲ್ಲಿ ತೇಲಿ ಮುಳುಗುವುದು ಒಂದು ಕಡೆ ಇದ್ದರೆ, ಅದನ್ನು ಸ್ವ-ಸಂಕಲ್ಪದ ಬಲದಿಂದ ಈಸಿ ದಡ ಸೇರುವ, ಅದರ ಮೂಲಕ ತನ್ನತನದ ಅಭಿವ್ಯಕ್ತಿಯನ್ನು ಸಾಧಿಸಿಕೊಳ್ಳುವ ಸಾಧ್ಯತೆ ಇನ್ನೊಂದು ಕಡೆ ಇದೆ. ಈ ಎರಡನೆಯ ಸಾಧ್ಯತೆ ಕಷ್ಟಸಾಧ್ಯವೆಂದೂ, ಅಷ್ಟೇಕೆ ಅವ್ಯಾವಹಾರಿಕವೆಂದೂ, ಕೆಲವೊಮ್ಮೆ ತೋರಬಹುದು. ಆದರೆ ವಿವೇಕಿಗಳ ನುಡಿಯ ಮಾರ್ಗದರ್ಶನದಲ್ಲಿ ಸಾಗುವ ಸಂಕಲ್ಪವೊಂದಿದ್ದರೆ ಹೊಸ ದಿಗಂತವು ತೆರೆದೀತು! 

## ಶ್ರೀಮಾತೆಯವರ ಉಪದೇಶಗಳು



❁ ಮಂತ್ರದ ಮೂಲಕ ದೇಹ ಪರಿಶುದ್ಧವಾಗುವುದು. ಭಗವಂತನ ಮಂತ್ರ ಜಪ ಮಾಡುವುದರಿಂದ ಮನುಷ್ಯ ಪವಿತ್ರನಾಗುವನು. ಎಲ್ಲವೂ ಮನಸ್ಸನ್ನೇ ಅವಲಂಬಿಸಿದೆ. ಮನಸ್ಸು ಶುದ್ಧವಾಗದೆ ಏನೂ ಸಾಧ್ಯವಾಗದು.

❁ ಭಗವಂತನಿಗೋಸ್ಕರ ಯಾರು ಎಲ್ಲವನ್ನೂ ತ್ಯಾಗ ಮಾಡಬಲ್ಲರು? ಭಗವಂತನಲ್ಲಿ ಶರಣಾಗತರಾದವರ ವಿಧಿಯೇ ಖಂಡಿಸಲ್ಪಡುತಲದೆ. ಭಗವಂತ ತನ್ನ ಕೈಬರಹವನ್ನು ತನ್ನ ಕೈಯಿಂದಲೇ ಅಳಿಸಬೇಕಾಗುವುದು. ಭಗವಂತನ ಸಾಕ್ಷಾತ್ಕಾರವಾದರೆ ಏನಾಗುವುದು? ಎರಡು ಕೋಡು ಮೂಡುವುದೆ? ಇಲ್ಲ, ಸದಸದ್ವಿಚಾರವುಂಟಾಗುವುದು, ಜ್ಞಾನಚೈತನ್ಯವುಂಟಾಗುವುದು. ಅವನು ಜನನ ಮರಣದಿಂದ ಪಾರಾಗುವನು. ಭಾವದಿಂದಲೇ ಎಲ್ಲವೂ ಲಭ್ಯವಾಗುವುದು. ಭಾವವಿಲ್ಲದೆ ಯಾರು ತಾನೇ ಭಗವಂತನನ್ನು ನೋಡಿದ್ದಾರೆ? ಭಾವವಿಲ್ಲದ ಯಾರೊಂದಿಗೆ ಭಗವಂತ ಮಾತನಾಡಿದ್ದಾನೆ? ಭಾವದಲ್ಲೇ ಭಗವಂತನ ದರ್ಶನ, ಅವನೊಂದಿಗೆ ಮಾತುಕತೆ. ಎಲ್ಲವೂ ಭಾವದಲ್ಲೇ ಉಂಟಾಗುವುದು.

❁ ನರೇನ್ ಹೇಳುತ್ತಿದ್ದ, ‘ಅಮ್ಮಾ, ಯಾವ ಜ್ಞಾನ ಗುರುವಿನ ಪಾದಪದ್ಮಗಳಿಂದ ನಮ್ಮನ್ನು ವಿಮುಖಗೊಳಿಸುವುದೋ ಅದು ಅಜ್ಞಾನ. ಗುರುವಿನ ಪಾದಪದ್ಮಗಳಿಂದ ದೂರ ಹೋದರೆ ಜ್ಞಾನಕ್ಕೆ ನೆಲೆಯೆಲ್ಲಿ?’ ಅಂತ. ನೀನು ಈ ಜ್ಞಾನದ ಕಲಸುಮೇಲೋಗರವನ್ನು ಬಿಟ್ಟುಬಿಡು. ಭಗವಂತನನ್ನು ಯಾರು ತಿಳಿದುಕೊಳ್ಳಬಲ್ಲರು? ಶುಕ, ವ್ಯಾಸ, ಶಿವ ಮೊದಲಾದವರೆಲ್ಲ ಹೆಚ್ಚೆಂದರೆ ಕಟ್ಟಿರುವೆಗಳು ಅಷ್ಟೆ.

❁ ಪ್ರಶ್ನೆ: ವಿಚಾರ ಸಂಪೂರ್ಣವಾಗಿ ಹೇಗೆ ಇಲ್ಲದಾದೀತು?

ಶ್ರೀಮಾತೆ: ಪೂರ್ಣಜ್ಞಾನವುಂಟಾಗದೆ ವಿಚಾರ ನಿಲ್ಲದು.

❁ ಕಲೆಗಾರ ಕುಂಚದಿಂದ ಕಣ್ಣು, ಮುಖ, ಕಿವಿ ಹೀಗೆ ಒಂದೊಂದಾಗಿ ಬರೆದು ಚಿತ್ರವನ್ನು ಬರೆಯುವ ಹಾಗೆ, ಭಗವಂತ ಒಂದೊಂದಾಗಿ ಪ್ರಾಣಿಗಳನ್ನು ಸೃಷ್ಟಿ ಮಾಡುತ್ತಾನೇನು? ಇಲ್ಲ; ಅವನಿಗೆ ಒಂದು ವಿಶೇಷ ಶಕ್ತಿಯಿದೆ. ಅವನು ‘ಹೂಂ’ ಎಂದಾಗ ಜಗತ್ತೆಲ್ಲವೂ ಸೃಷ್ಟಿಗೊಳ್ಳುತ್ತದೆ; ‘ಊಹೂಂ’ ಎಂದಾಗ ಅದೆಲ್ಲವೂ ಇಲ್ಲದಾಗುತ್ತದೆ. ಏನೇನು ಸೃಷ್ಟಿಯಾಗುವುದೋ ಅದೆಲ್ಲವೂ ಏಕಕಾಲಕ್ಕೇ ಆಗುತ್ತದೆ. ಒಂದೊಂದಾಗಿ ಸೃಷ್ಟಿಯಾಗುವುದಿಲ್ಲ.

❁ ಜಪತಪಾದಿಗಳಿಂದ ಕರ್ಮಪಾಶ ಕತ್ತರಿಸಿ ಹೋಗುವುದು. ಆದರೆ ಪ್ರೇಮ, ಭಕ್ತಿಗಳಿಲ್ಲದೆ ಭಗವಂತನನ್ನು ಪಡೆಯಲಾಗದು. ಜಪತಪಗಳೆಂದರೆ ಏನು ಗೊತ್ತೆ? ಅವುಗಳಿಂದ ಇಂದ್ರಿಯವೇ ಮೊದಲಾದವುಗಳ ಪ್ರಭಾವ ಕುಗ್ಗಿಹೋಗುವುದು.

❁ ವೃಂದಾವನದ ಗೊಲ್ಲ ಹುಡುಗರು ಶ್ರೀಕೃಷ್ಣನನ್ನು ಜಪ-ಧ್ಯಾನಗಳಿಂದ ಪಡೆದರೆ? ಇಲ್ಲ, ಅವರು ‘ಬಾರೋ, ತಿನ್ನೋ; ಇದನ್ನು ತೊಗೊಳ್ಳೋ’– ಎನ್ನುತ್ತ, ಅಂಥ ಪ್ರೀತಿಯಿಂದ ತಮ್ಮ ಶ್ರೀಕೃಷ್ಣನನ್ನು ಪಡೆದರು.

ಶ್ರೀಶಾರದಾದೇವಿ ವಚನವೇದದಿಂದ

# ರಾಮಕಿಂಕರ ಭದ್ರಾಚಲ ರಾಮದಾಸ

ಸ್ವಾಮಿ ವೀರೇಶಾನಂದ



ಆಂಧ್ರಪ್ರದೇಶದಲ್ಲಿ ಒಂದು ಹಳ್ಳಿ. ಅದರ ಹೆಸರು ನೆಲಕೊಂಡ ಪಲ್ಲಿ. ಅಲ್ಲೊಂದು ಬ್ರಾಹ್ಮಣ ಕುಟುಂಬ. ಈ ಕುಟುಂಬದಲ್ಲಿ ಕಂಚೆರ್ಲ ಗೋಪಣ್ಣನು ೧೬೨೦ರಲ್ಲಿ ಹುಟ್ಟಿದನು. ಅವನೇ ಮುಂದೆ ಭದ್ರಾಚಲ ರಾಮದಾಸರೆಂದು ಪ್ರಸಿದ್ಧನಾದನು. ಗೋಪಣ್ಣನ ತಂದೆ ಲಿಂಗಣ್ಣ ಮೂರ್ತಿ. ತಾಯಿ ಕಾಮಾಂಬಾ. ಲಿಂಗಣ್ಣ ಮೂರ್ತಿ ಗೋಲ್ಕೊಂಡದ ಕುತುಬ್‌ಶಾಹಿ ಮುಸ್ಲಿಂ ದೊರೆಗಳ ಬಳಿ ದಿವಾನರಾಗಿದ್ದರು. ಗೋಪಣ್ಣನು ಚಿಕ್ಕ ವಯಸ್ಸಿನಲ್ಲಿ ಇರುವಾಗಲೇ ಅವರು ಮರಣ ಹೊಂದಿದರು. ಅವರು ಬಹಳಷ್ಟು ಆಸ್ತಿಯನ್ನು ಬಿಟ್ಟು ಹೋಗಿದ್ದರು. ಕಾಲಕ್ರಮದಲ್ಲಿ ಗೋಪಣ್ಣನಿಗೆ ಮದುವೆಯಾಯಿತು. ಸುಂದರಿಬಾಯಿ ಅವನ ಪತ್ನಿ. ಇಬ್ಬರಿಗೂ ಮಗನೊಬ್ಬನು ಹುಟ್ಟಿದನು. ಅವನ ಹೆಸರು ರಾಘವ. ಗೋಪಣ್ಣ ಜನ್ಮಾರಭ್ಯ ರಾಮಭಕ್ತ. ಅವನು ತನ್ನೆಲ್ಲ ಸಂಪತ್ತನ್ನೂ ರಾಮನ ಸೇವೆಗಾಗಿ ವಿನಿಯೋಗಿಸಿಬಿಟ್ಟನು. ತನ್ನೆಲ್ಲ ಕಾಲವನ್ನೂ ಭಜನೆ, ಕೀರ್ತನೆ, ರಾಮಕಥೆಗಳಲ್ಲಿ ಕಳೆಯುತ್ತಿದ್ದನು. ಪ್ರತಿವರ್ಷ ರಾಮನವಮಿ ಉತ್ಸವವನ್ನು ಹತ್ತು ದಿನಗಳ ಕಾಲ ವಿಜೃಂಭಣೆಯಿಂದ ಮಾಡುತ್ತಿದ್ದನು. ಅದಕ್ಕಾಗಿ ಬಹಳಷ್ಟು ಹಣವನ್ನು ವ್ಯಯಿಸುತ್ತಿದ್ದನು.

ಗೋಪಣ್ಣನು ಯಾವತ್ತೂ ತನ್ನ ಮನೆಯಲ್ಲಿ ರಾಮಕೀರ್ತನೆಯನ್ನು ಮಾಡುತ್ತ ಇರುತ್ತಿದ್ದನು. ರಾಮನನ್ನು ಹೊಗಳುವ ಅನೇಕ ಗೀತೆಗಳನ್ನು ತಾನೇ ರಚಿಸಿ, ವೀಣೆಯನ್ನು ನುಡಿಸುತ್ತ ಹಾಡುತ್ತಿದ್ದನು. ಹೀಗೆ ರಾಮನನ್ನು ಕುರಿತಾದ ಭಜನಾನಂದದಲ್ಲಿ ಅವನು ಮುಳುಗಿ ಹೋಗಿದ್ದನು. ಅವನಿಗೆ ಸಂಸ್ಕೃತ ಜ್ಞಾನ ಚೆನ್ನಾಗಿಯೇ ಇತ್ತು. ಆದರೂ ಆಡುನುಡಿಯಾದ ತೆಲುಗು ಭಾಷೆಯಲ್ಲಿಯೇ ಗೀತೆಗಳನ್ನು ರಚಿಸುತ್ತಿದ್ದನು. ತನ್ನ ಹತ್ತಿರ ಬಂದ ಜನರಿಗೆ ಭಕ್ತಿಯ ಮೂಲಕವೇ ಭಗವಂತನನ್ನು ಒಲಿಸಿಕೊಳ್ಳುವಂತೆ ಪ್ರೇರೇಪಿಸುತ್ತಿದ್ದನು. ಅದಕ್ಕೆ ಹೆಚ್ಚಿನ ವ್ರತಾದಿಗಳ ಆವಶ್ಯಕತೆಯಿಲ್ಲವೆಂದು ಅವನು ಹೇಳುತ್ತಿದ್ದನು.

ಅಂದು ರಾಮನವಮಿಯ ಉತ್ಸವ. ಮನೆಯಲ್ಲಿ ಸಡಗರ. ನೂರಾರು ಜನರು ಸೇರಿದ್ದರು. ಸಂತರು, ಸಂನ್ಯಾಸಿಗಳು ಬಂದು ಸೇರಿದ್ದರು. ವೇದಪಾರಾಯಣ ಮತ್ತು ರಾಮಾಯಣ ಪಾರಾಯಣಗಳು ನಡೆದವು. ಸುಂದರಿಬಾಯಿಯು ಅಡುಗೆಮನೆಯಲ್ಲಿ ಅಡುಗೆಯ ತಯಾರಿಯಲ್ಲಿ ತೊಡಗಿದ್ದಳು. ಅವಳಿಗೆ ನಡುನಡುವೆ ಮಗು ರಾಘವನನ್ನು ನೋಡಿಕೊಳ್ಳುವ ಕೆಲಸ ಬೇರೆ. ಹಾಗಿದ್ದರೂ ಮಧ್ಯೆ ಮಧ್ಯೆ ಬಂದು ಕೀರ್ತನೆಯನ್ನು ಕೇಳುತ್ತಿದ್ದಳು. ಕೀರ್ತನೆ ಮುಗಿ ಯಿತು. ಈಗ ಗೋಪಣ್ಣನು ದಿವ್ಯನಾಮ ಸಂಕೀರ್ತನೆಯನ್ನು ಆರಂಭಿಸಿದನು. ಅವನನ್ನು ನೆರೆದಿದ್ದವರೆಲ್ಲರೂ ಅನುಸರಿಸುತ್ತಿದ್ದರು. ಸುಂದರಿಬಾಯಿ ಮಗುವಿಗೆ ಹಾಲು ಕುಡಿಸಿ, ಮಲಗಿಸಿದಳು. ಮಗು ಶಾಂತವಾಗಿ ಮಲಗಿತ್ತು. ಸುಂದರಿಬಾಯಿಯು ಅಡುಗೆಯ ಕೆಲಸವನ್ನೆಲ್ಲ ಮುಗಿಸಿ, ನಾಮಸಂಕೀರ್ತನೆಯಲ್ಲಿ ಪಾಲ್ಗೊಳ್ಳಲು ಹೋದಳು. ಇತ್ತ ಕಡೆ ಮಗು ನಿದ್ದೆಯಿಂದ ಎದ್ದು, ಅಮ್ಮನನ್ನು ಕಾಣದೆ ಅಡುಗೆಯ ಮನೆಗೆ ಹೋಯಿತು. ಅಲ್ಲಿ ಬಿಸಿ ಬಿಸಿ ಪಾಯಸವನ್ನು ಪೇರಿಸಿ ಇಟ್ಟಿದ್ದ ದೊಡ್ಡ ಪಾತ್ರೆಗೆ ಅಕಸ್ಮಾತ್ ಬಿದ್ದು ಬಿಟ್ಟನು. ಸುಟ್ಟ ಗಾಯಗಳಿಂದ ಮಗು ಸತ್ತೇಹೋಯಿತು. ನಾಮಸಂಕೀರ್ತನೆಯನ್ನು ಮುಗಿಸಿಬಂದ ಸುಂದರಿಬಾಯಿ ನಡೆದದ್ದನ್ನು ಕಂಡು ಹೌಹಾರಿದಳು. ಆದರೂ ಮನೆಯಲ್ಲಿ ನೂರಾರು ಜನ ನೆರೆದಿದ್ದನ್ನು ನೆನೆದು, ಮೌನವಾಗಿ ಅಳುತ್ತ ಕುಳಿತಳು. ಸ್ವಲ್ಪಹೊತ್ತಿನಲ್ಲಿಯೇ ಗೋಪಣ್ಣನು ಪ್ರಸಾದದ ವ್ಯವಸ್ಥೆಯ ಬಗ್ಗೆ ಅಡುಗೆಯ ಮನೆಗೆ ವಿಚಾರಿಸಲು ಬಂದನು. ಪರಿಸ್ಥಿತಿಯನ್ನು ತಿಳಿದು ಏನೂ ತೋಚದೆ ದಿಗ್ಭ್ರಾಂತನಾಗಿ ಕುಳಿತುಬಿಟ್ಟನು. ಅಲ್ಲದೆ ಇತರ ಭಕ್ತರು ಕೂಡ ಒಬ್ಬೊಬ್ಬರಾಗಿ ಬರಲಾರಂಭಿಸಿದರು. ಎಲ್ಲರೂ ನಡೆದುದನ್ನು ತಿಳಿದು ದುಃಖಿತರಾದರು.

ಈ ಮಧ್ಯೆ ಒಬ್ಬ ಯೋಗಿಯು ಮನೆಯನ್ನು ಪ್ರವೇಶಿಸಿದನು. ಅವನು ''ಏನಾಯಿತು?'' ಎಂದು ವಿಚಾರಿಸಿದನು. ಅನಂತರ

''ಮಗು ಸತ್ತಿಲ್ಲ'' ಎಂದು ಉದ್ಘೋಷಿಸಿದನು. ಆತ ಮಗುವಿನ ದೇಹವನ್ನು ಸ್ಪರ್ಶಿಸಿದನು. ಮಗು ಕಣ್ಣು ತೆರೆಯಿತು. ಅದರ ಅಂಗಗಳು ಚಲಿಸಲಾರಂಭಿಸಿದವು. ಯೋಗಿಯು ಮಗುವನ್ನು ಗೋಪಣ್ಣನಿಗೆ ಒಪ್ಪಿಸಿ, ಬಾಗಿಲಿನತ್ತ ಹೊರಟೇಬಿಟ್ಟನು. ಬೇರೆಯವರು ಹೋಗಿ ನೋಡುವಷ್ಟರಲ್ಲಿ ಅವನು ಮರೆಯಾದನು. ನೆರೆದಿದ್ದ ಭಕ್ತರೆಲ್ಲ ಆ ಯೋಗಿಯು ಯಾರು ಎಂದು ಆಶ್ಚರ್ಯಪಟ್ಟರು. ಅವನು ಶ್ರೀರಾಮನೆಂದೇ ಗೋಪಣ್ಣನು ದೃಢವಿಶ್ವಾಸದಿಂದ ನಂಬಿದನು. ಕೃತಜ್ಞತೆಯಿಂದ ಅವನ ಕಣ್ಣುಗಳಲ್ಲಿ ನೀರು ಸುರಿಯುತ್ತಿತ್ತು.

ವರ್ಷಗಳು ಕಳೆದವು. ಗೋಪಣ್ಣನಿಗೆ ಸ್ವಂತ ವರಮಾನ ಏನೂ ಇರಲಿಲ್ಲ. ಅವನು ಯಾವ ಉದ್ಯೋಗಕ್ಕೂ ಕೈಹಾಕಲಿಲ್ಲ. ಆದರೆ ತನ್ನ ಪಿತ್ರಾರ್ಜಿತವಾದ ಹಣವನ್ನು ಹೇರಳವಾಗಿ ದಾನಧರ್ಮಗಳಲ್ಲಿ ವ್ಯಯಿಸಿಬಿಟ್ಟನು. ನಿಧಾನವಾಗಿ ಅವನು ಎಲ್ಲವನ್ನೂ ಕಳೆದುಕೊಂಡನು. ಕಡೆಗೆ ದೊಡ್ಡದೊಂದು ಬಂಗಲೆ ಮತ್ತು ಕೆಲವು ಪಾತ್ರೆ ಪಡಗಗಳು ಮಾತ್ರವೇ ಉಳಿದುಕೊಂಡವು. ಈಗ ಗೋಪಣ್ಣನಿಗೆ ಚಿಂತೆ ಆರಂಭವಾಯಿತು. ತನ್ನ ಪರಿಸ್ಥಿತಿಯ ಬಗ್ಗೆ ಅಲ್ಲ; ಮುಂದಿನ ರಾಮನವಮಿ ಉತ್ಸವವನ್ನು ಆಚರಿಸುವಷ್ಟು ಹಣ ಅವನ ಹತ್ತಿರ ಇರಲಿಲ್ಲ—ಅದಕ್ಕೆ.

ಗೋಪಣ್ಣನಿಗೆ ಒಬ್ಬ ಸೋದರಮಾವನಿದ್ದನು. ಅವನ ಹೆಸರು ಅಂಕಣ್ಣ ಎಂದು. ಅಂಕಣ್ಣನು ಮುಸ್ಲಿಂ ದೊರೆಗಳ ಹತ್ತಿರ ದಿವಾನನಾಗಿದ್ದನು. ಈ ದೊರೆಯ ಹೆಸರು ತಾನಾ ಷಾ ಎಂದು. ಅವನ ಸಹಾಯವನ್ನು ಪಡೆಯುವಂತೆ, ಗೋಪಣ್ಣನ ಹೆಂಡತಿ ಸುಂದರಿಬಾಯಿ ಒತ್ತಾಯಿಸಿದಳು. ಅದಕ್ಕೆ ಒಪ್ಪಿ ಗೋಪಣ್ಣನು ಅಂಕಣ್ಣನ ಮನೆಗೆ ಹೋದ. ಅಲ್ಲಿ ತನ್ನ ದೈನ್ಯತೆಯನ್ನು ತೋಡಿಕೊಂಡ. ಅಂಕಣ್ಣ ಅವನಿಗೆ ಸಹಾಯ ಮಾಡಲು ಒಪ್ಪಿಕೊಂಡನು. ತನ್ನ ದೊರೆಗೆ ಹೇಳಿ ಒಂದು ಉದ್ಯೋಗವನ್ನು ಕೊಡಿಸಲು ಮುಂದಾದನು. ಆದರೆ ಶೀಘ್ರದಲ್ಲಿಯೇ ಜರುಗಬೇಕಾಗಿರುವ ರಾಮನವಮಿಯ ವ್ಯವಸ್ಥೆ ಹೇಗೆ ಮಾಡುವುದು? ಕಡೆಗೆ ಅಂಕಣ್ಣನು ೧೦೦೦ ಮೊಹರುಗಳನ್ನು ಉತ್ಸವಕ್ಕಾಗಿ ನೀಡಿದನು. ಇದರಿಂದ ಗೋಪಣ್ಣನ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವನು ಮಾವನನ್ನು ರಾಮೋತ್ಸವಕ್ಕೆ ಆಹ್ವಾನಿಸಿದನು. ಮನೆಗೆ ಹೋಗಿ ರಾಮನವಮಿಯ ಸಿದ್ಧತೆಗಳನ್ನು ಮಾಡಿದನು. ಭರ್ಜರಿಯಾಗಿ ಆ ವರ್ಷವೂ ರಾಮೋತ್ಸವವು ವೈಭವದಿಂದ ನಡೆದೇಬಿಟ್ಟಿತು. ಉತ್ಸವವನ್ನು ಮುಗಿಸಿ ಕೊಂಡು ಗೋಪಣ್ಣನು ಅಂಕಣ್ಣನ ಮನೆಗೆ ಹೋದನು.

ಅಂಕಣ್ಣ ತನ್ನ ಸೋದರಳಿಯನನ್ನು ದೊರೆಗಳ ಹತ್ತಿರ ಕರೆದುಕೊಂಡುಹೋದನು. ಈತನ ತಂದೆ ದಿವಾನರಾಗಿದ್ದರೆಂದು ಹೇಳಿದನು. ದಿವಾನರ ಮಗನಿಗೆ ಬಂದೊದಗಿದ ದುರ್ದಶೆಯನ್ನು ಕಂಡು ದೊರೆ ತಾನಾ ಷಾ ವಿಸ್ಮಿತನಾದನು. ಕಡೆಗೆ ಅಂಕಣ್ಣನ ವಿನಂತಿಯ ಮೇರೆಗೆ, ಗೋಪಣ್ಣನನ್ನು ಭದ್ರಾಚಲದ ತಹಸೀಲ್ದಾರನನ್ನಾಗಿ ನಿಯಮಿಸಿದನು.

ತಮ್ಮ ಹೊಸ ತಹಸೀಲ್ದಾರನು ಭದ್ರಾಚಲವನ್ನು ಸೇರಲು, ಆ ಊರಿನ ಜನ ತುಂಬುಗೌರವದಿಂದ ಅವನನ್ನು ಸ್ವಾಗತಿಸಿದರು. ಊರಿನ ಪುರಾತನ ರಾಮದೇವರ ದೇವಸ್ಥಾನಕ್ಕೆ ಕರೆದುಕೊಂಡು ಹೋದರು. ದೇವಸ್ಥಾನವು ಜೀರ್ಣವಾದ ಸ್ಥಿತಿಯಲ್ಲಿತ್ತು; ಸುಣ್ಣ ಬಣ್ಣಗಳನ್ನು ಕಂಡು ಎಷ್ಟೋ ವರ್ಷವಾಗಿತ್ತು. ಎಣ್ಣೆ ದೀಪ ಕೂಡ ಇರಲಿಲ್ಲ. ಕಸಕಡ್ಡಿಗಳು ಎಲ್ಲೆಡೆ ಬಿದ್ದಿದ್ದವು. ನೋಡಿಕೊಳ್ಳುವವರೇ ಇರಲಿಲ್ಲ. ಬಾವಲಿಗಳು ಅತ್ತಿಂದಿತ್ತ ಹಾರಾಡುತ್ತಿದ್ದವು. ಹೊಸ ತಹಸೀಲ್ದಾರರು ಬಂದಿದ್ದಾರೆಂದು ಅಂದಷ್ಟೇ ದೇವರಿಗೆ ಒಂದು ಹಾರ ಹಾಕಿದ್ದರು, ಅಷ್ಟೇ. ಅಲ್ಲಿನ ಪೂಜಾರಿಯು ಮಂದಿರವನ್ನು ಜೀರ್ಣೋದ್ಧಾರಗೊಳಿಸುವಂತೆ ಹೊಸ ಧಣಿಯನ್ನು ಕೇಳಿಕೊಂಡನು. ಆತನ ಆಡಳಿತ ಕಾಲದಲ್ಲಿಯೇ ಕುಂಭಾಭಿಷೇಕವನ್ನು ನಡೆಸುವಂತೆ ಪ್ರಾರ್ಥಿಸಿದನು. ಗೋಪಣ್ಣನು ಇದು ರಾಮನ ಆಣತಿಯೆಂದೇ ಬಗೆದನು. ದೇಗುಲದ ನವೀಕರಣ ಕಾರ್ಯವನ್ನು ಮಾಡುವೆನೆಂದು ಅವನು ಸಂಕಲ್ಪ ಮಾಡಿದನು. ರಾಮದೇವರು ಈ ಪವಿತ್ರಕಾರ್ಯಕ್ಕೆ ತನ್ನನ್ನು ನಿಮಿತ್ತವನ್ನಾಗಿ ಮಾಡಿಕೊಂಡರೆ ತಾನು ಧನ್ಯನೆಂದು ಆತನು ಅಲ್ಲಿದ್ದವರ ಮುಂದೆ ಬಿನ್ನವಿಸಿಕೊಂಡನು.

ಅಂದಿನಿಂದ ದಿನಾರಾತ್ರಿ ಇದರ ಬಗ್ಗೆಯೇ ಗೋಪಣ್ಣನು ಯೋಚಿಸಲಾರಂಭಿಸಿದನು. ಗೋಲ್ಕೊಂಡದ ಮನೆಯನ್ನೂ ತನ್ನ ಹೆಂಡತಿಯ ಅಭರಣಗಳನ್ನೂ ಅವನು ಮಾರಿಬಿಟ್ಟನು. ದೇಗುಲದ ಮೂರ್ತಿಗಳನ್ನು ಸ್ಥಳಾಂತರಿಸಿ, ಗುಡಿಯನ್ನು ಕೆಡವಿಸಿದನು. ಹೊಸದೊಂದು ಭವ್ಯ ಮಂದಿರವನ್ನು ಕಟ್ಟಿಸಬೇಕೆಂದು ಹೊರಟನು. ಆದರೆ ತನ್ನ ಸ್ವಂತ ಆಸ್ತಿಯನ್ನು ಮಾರಿ ಬಂದ ಹಣ ಈ ಕಾರ್ಯಕ್ಕೆ ಎಳ್ಳಷ್ಟೂ ಸಾಕಾಗಲಿಲ್ಲ. ದೇವರ ಕಾರ್ಯ ನಿಲ್ಲಬಾರದಷ್ಟೇ. ಹೀಗಾಗಿ ದೊರೆಗಳ ಹೆಸರಿನಲ್ಲಿ ಸಂಗ್ರಹಿಸಿದ್ದ ಕಂದಾಯದ ಹಣವನ್ನು ಇದಕ್ಕೆ ಉಪಯೋಗಿಸಿಬಿಟ್ಟನು. ಹೇಗಾದರೂ ಮಾಡಿ ಹಣ ಹೊಂದಿಸಿ, ರಾಜನಿಗೆ ಒಪ್ಪಿಸೋಣವೆಂದು ಅಂದುಕೊಂಡನು. ರಾಮನವಮಿಗೆ ಮುಂಚೆಯೇ ದೇವಸ್ಥಾನ ಸಿದ್ಧವಾಯಿತು. ಈ ಸಲದ ರಾಮನವಮಿಯನ್ನು ಭದ್ರಾಚಲದಲ್ಲಿಯೇ ಆಚರಿಸಲು ಗೋಪಣ್ಣನು ಸಂಕಲ್ಪಿಸಿದನು.

ಪ್ರತಿವರ್ಷದಂತೆ ಈ ವರ್ಷವೂ ಅನೇಕ ಸಾಧುಸಂತರನ್ನು ಗೋಪಣ್ಣನು ಆಹ್ವಾನಿಸಿದನು. ಎಲ್ಲರೂ ಅವನ ಭಕ್ತಿ ಮತ್ತು ಔದಾರ್ಯಗಳನ್ನು ಕೊಂಡಾಡುತ್ತಿದ್ದರು. ಇಂಥ ಸುಂದರ ದೇವಸ್ಥಾನವನ್ನು ಕಟ್ಟಿದ್ದಕ್ಕೆ ಮತ್ತು ಇಷ್ಟೊಂದು ದೊಡ್ಡ ಬಗೆಯಲ್ಲಿ ಉತ್ಸವವನ್ನು ಆಚರಿಸುತ್ತಿರುವುದಕ್ಕೆ ಅವನನ್ನು ಹಾಡಿ ಹೊಗಳುತ್ತಿದ್ದರು. ಉತ್ಸವ ಆರಂಭವಾಯಿತು. ಗೋಪಣ್ಣನು ರಾಮದೇವರ ಉಯ್ಯಾಲೆ ಉತ್ಸವವನ್ನು ನಡೆಸುತ್ತಿದ್ದನು; ಸಂತೋಷದಿಂದ ಶ್ರೀರಾಮನ ಸ್ತುತಿಯನ್ನು ಮಾಡುತ್ತಿದ್ದನು. ಶ್ರೀರಾಮದೇವರಿಗೆ ಒಂದು ಸಾವಿರ ಚಿನ್ನದ ಹೂವುಗಳನ್ನು ಮಾಡಿಸಿದ್ದನು. ಅವನು ಹಾಡುತ್ತಿರುವಾಗ ಪುರೋಹಿತರು ಅದನ್ನು ಉಯ್ಯಾಲೆಯಲ್ಲಿದ್ದ ದೇವರಿಗೆ ನಿವೇದಿಸುತ್ತಿದ್ದರು. ಇಡೀ ಭದ್ರಾಚಲ ಗ್ರಾಮವೇ ಆನಂದದಿಂದ ತುಂಬಿ ತುಳುಕಾಡುತ್ತಿತ್ತು.



ಭದ್ರಾಚಲದಲ್ಲಿರುವ ರಾಮದಾಸರ ಪ್ರತಿಮೆ

ಇದನ್ನೆಲ್ಲ ಕಂಡು ಸಹಿಸದವನೊಬ್ಬನು ಆ ಗ್ರಾಮದಲ್ಲಿ ಇದ್ದನು. ಅವನು ಗೋಪಣ್ಣನ ಮೇಲಿನ ಮಾತ್ಸರ್ಯದಿಂದ ಮುಸ್ಲಿಂ ದೊರೆಗೆ ಒಂದು ರಹಸ್ಯ ಪತ್ರವನ್ನು ಬರೆದನು. ಕಂದಾಯದ ಹಣವನ್ನು ದುರುಪಯೋಗಪಡಿಸಿಕೊಂಡು, ಗೋಪಣ್ಣನು ರಾಮನ ದೇವಸ್ಥಾನವನ್ನು ಕಟ್ಟಿದ್ದಲ್ಲದೆ, ಉತ್ಸವವನ್ನೂ ನಡೆಸಿ ದುಂದುವೆಚ್ಚ ಮಾಡಿದ್ದಾನೆಂದು ಅದರಲ್ಲಿ ದೂರುಕೊಟ್ಟನು. ದೊರೆಯು ತನ್ನ ಹಣಕಾಸು ಅಧಿಕಾರಿಯನ್ನು ಕರೆಸಿ ಕೇಳಿದನು. ಆತನು ಭದ್ರಾಚಲದಿಂದ ಇನ್ನೂ ಕಂದಾಯದ ಹಣ ಬಾಕಿಯಿದೆಯೆಂದು ಹೇಳಿದನು. ಇದನ್ನು ಕೇಳಿದ ದೊರೆಯು ಕೋಪಗೊಂಡು, ಗೋಪಣ್ಣನನ್ನು ಬಂಧಿಸಿ ಎಳೆದು ತರುವಂತೆ ಆಜ್ಞೆಯಿತ್ತನು.

ಅಂದು ರಾಮನವಮಿ ಉತ್ಸವದ ಕಡೆಯ ದಿನ. ಆಗತಾನೇ ಪೂಜೆಯನ್ನು ಮುಗಿಸಿ ಗೋಪಣ್ಣನು ದೇವಸ್ಥಾನದಿಂದ ಹೊರಗೆ ಬರುತ್ತಿದ್ದನು. ರಾಜಭಟರು ಅವನನ್ನು ಬಂಧಿಸಿದರು. ಗೋಪಣ್ಣನು ಮರುಮಾತಿಲ್ಲದೆ ಅವರ ಜೊತೆಗೆ ಹೊರಟನು. ಇದನ್ನು ಕಂಡು ಊರಿಗೆ ಊರೇ ಮರುಗಿತು. ರಾಜಭಟರು ಗೋಪಣ್ಣನನ್ನು ದರ್ಬಾರಿಗೆ ಎಳೆತಂದರು. ''ಕಂದಾಯದ ಹಣವನ್ನು ಏಕೆ ಕಳಿಸಲಿಲ್ಲ?'' ಎಂದು ರಾಜನು ಗದರಿಸಿ ಕೇಳಿದನು. ಗೋಪಣ್ಣನು ನಿಜಸ್ಥಿತಿಯನ್ನು ನಿವೇದಿಸಿದನು. ಒಡನೇ ಕಂದಾಯದ ಹಣವಾದ ಹತ್ತುಸಾವಿರ ಮೊಹರುಗಳನ್ನು ತಂದೊಪ್ಪಿಸುವಂತೆ ದೊರೆಯು ಆದೇಶವಿತ್ತನು. ತನ್ನಲ್ಲಿ ಅಷ್ಟು ಹಣವಿಲ್ಲವೆಂದು ಗೋಪಣ್ಣನು ಒಪ್ಪಿಕೊಂಡನು. ದೊರೆಯು ಗೋಪಣ್ಣನನ್ನು ಗೋಲ್ಕಂಡದ ಕೋಟೆಯ ಸೆರೆಮನೆಯಲ್ಲಿ ಇರಿಸಬೇಕೆಂದೂ, ಹಣವನ್ನು ಒಪ್ಪಿಸುವ ತನಕ ಬಿಡುಗಡೆ ಮಾಡದಿರುವಂತೆಯೂ ಕಟ್ಟಪ್ಪಣೆ ಇತ್ತನು.

ಇನ್ನುಮುಂದೆ ಗೋಪಣ್ಣನನ್ನು ರಾಮದಾಸರೆಂದು ಕರೆಯೋಣ. ಅವನ ರಾಮಭಕ್ತಿ, ಶರಣಾಗತಿ ಮತ್ತು ಸೇವಾಮನೋಭಾವಗಳನ್ನು ಜನರು ಮೆಚ್ಚಿಕೊಂಡಿದ್ದರು. ರಾಮದಾಸರೆಂದು ಅವನನ್ನು ಜನರೆಲ್ಲ ಗೌರವಿಸತೊಡಗಿದರು. ಗೋಪಣ್ಣನು ಸಂತ ರಾಮದಾಸರೆಂದು ಪ್ರಖ್ಯಾತಿಯಾದನು.

ರಾಮದಾಸರು ಹನ್ನೆರಡು ವರ್ಷಗಳ ಕಾಲ ಸೆರೆಮನೆ ವಾಸವನ್ನು ಅನುಭವಿಸಬೇಕಾಯಿತು. ಈ ಸಂದರ್ಭದಲ್ಲಿ ಅನೇಕ ರೀತಿಯ ಕ್ರೂರ ಶಿಕ್ಷೆಗಳಿಗೆ ಅವರು ಗುರಿಯಾಗಬೇಕಾಯಿತು ಎಂದು ಚರಿತ್ರಕಾರರು ಬರೆಯುತ್ತಾರೆ. ಮಾನಸಿಕ ನೋವಿನೊಂದಿಗೆ ದೈಹಿಕ ಪರಿತಾಪದಿಂದಲೂ ಅವರು ನರಳಿದರು. ರಾಮದಾಸರ ಬೆನ್ನಿನ ಮೇಲೆ ಕಾದ ಕಬ್ಬಿಣದ ಸರಳುಗಳನ್ನು ಇಡಲಾಯಿತು. ಇದರಿಂದ ಉಂಟಾದ ಸುಟ್ಟಗಾಯಗಳ ಮೇಲೆ ಖಾರದ ಪುಡಿಯನ್ನು ಸುರಿಯಲಾಯಿತು. ಕಬ್ಬಿಣದ ದೊಡ್ಡ ದೊಡ್ಡ ಭಾರವನ್ನು ಅವರು ಹೊರುವಂತೆ ಮಾಡಿದರು. ಪ್ರತಿದಿನವೂ ಚರ್ಮದ ಚಾವಟಿಯಿಂದಲೂ, ಮುಳ್ಳುಮುಳ್ಳಾಗಿರುವ ಕಬ್ಬಿಣದ ಗೋಳಕದಿಂದಲೂ ಅವರ ದೇಹದ ಮೇಲೆ ನೂರಾರು ಬಾರಿ ಬಾರಿಸಲಾಯಿತು. ಇದಲ್ಲದೆ ಹಳಸಾದ ಆಹಾರವನ್ನು ಅವರಿಗೆ ನೀಡಿದರು.

ಈ ಕಠಿಣ ಸಂದರ್ಭದಲ್ಲಿಯೂ ರಾಮದಾಸರಿಗೆ ರಾಮನ ಮೇಲಿದ್ದ ಶ್ರದ್ಧೆ ಸ್ವಲ್ಪವೂ ಕಡಿಮೆಯಾಗಲಿಲ್ಲ. ಈ ಅವಧಿಯಲ್ಲಿ ಅವರು ನೂರಾರು ಕೀರ್ತನೆಗಳನ್ನು ರಚಿಸಿದರು. ತಮ್ಮ ಈ ದಾರುಣ ಪರಿಸ್ಥಿತಿಯನ್ನು ರಾಮದೇವರಿಗೆ ದೈನ್ಯದಿಂದ ಬಿನ್ನವಿಸಿಕೊಂಡರು. ಕೆಲವೊಂದು ಕೃತಿಗಳಲ್ಲಿ ರಾಮ, ಸೀತೆ, ಲಕ್ಷ್ಮಣರನ್ನು ಹಾಡಿಹೊಗಳುವರು, ತಮ್ಮ ಭಕ್ತಿಯನ್ನು ತೋಡಿಕೊಳ್ಳುವರು. ಇನ್ನು ಕೆಲವು ಕೃತಿಗಳಲ್ಲಿ ರಾಮದೇವರ ದಿವ್ಯ ಸೌಂದರ್ಯವನ್ನು ಬಣ್ಣಿಸಿ ಆನಂದಪಡುವರು. ತಮ್ಮನ್ನು ಕಡುಕಷ್ಟದಲ್ಲಿ ಸಿಲುಕಿಸಿರುವುದಕ್ಕೆ ರಾಮದೇವರ ಮೇಲೆ ಕೋಪಿಸಿಕೊಳ್ಳುವರು. ಒಮ್ಮೆ ಭಗವದಾನಂದದಲ್ಲಿ ಅವರ ಮನಸ್ಸು ಲೀನವಾಗಿದ್ದರೆ, ಇನ್ನೊಮ್ಮೆ ಭಗವದ್ವಿರಹದಲ್ಲಿ ಅದು ತಲ್ಲಣಗೊಳ್ಳುತ್ತಿತ್ತು. ಆದರೆ ಒಂದು ಕ್ಷಣವೂ ಅವರು ರಾಮಚಿಂತನೆಯನ್ನು ಬಿಡಲಿಲ್ಲ; ರಾಮಭಕ್ತಿಯನ್ನು ತ್ಯಜಿಸಲಿಲ್ಲ; ರಾಮನಾಮ ಸಂಕೀರ್ತನೆಯನ್ನು ನಿಲ್ಲಿಸಲಿಲ್ಲ.

ಹೀಗೆ ಶ್ರೀರಾಮನು ಹನ್ನೆರಡು ವರ್ಷಗಳ ಕಾಲ ತನ್ನ ಪ್ರಿಯ ಭಕ್ತನನ್ನು ಕಡುಕಷ್ಟಕ್ಕೆ ಸಿಲುಕಿಸಿ ಪರೀಕ್ಷಿಸಿದನು. ಒಂದು ದಿನ ಒಂದು ಅದ್ಭುತ ಘಟನೆ ನಡೆಯಿತು: ಸರಿರಾತ್ರಿಯ ಹೊತ್ತು. ದೊರೆ ತಾನಾ ಷಾ ವಿಶ್ರಾಂತಿ ಪಡೆಯುತ್ತಿದ್ದನು. ರಾಮದಾಸರ ಸಹಾಯಕರೆಂದು ಹೇಳಿಕೊಂಡ ಸುಂದರಾಂಗರಾದ ಇಬ್ಬರು ನವಯುವಕರು ಅರಮನೆಗೆ ಬಂದರು. ದೊರೆಯ ಅಂತಃಪುರದ ಬಾಗಿಲನ್ನು ಬಡಿದರು. ಶತ್ರುಗಳೆಂದು ಭಾವಿಸಿ ರಾಜನು ಖಡ್ಗವನ್ನು ಸೆಳೆದು ಬಾಗಿಲನ್ನು ತೆಗೆದನು. ಬಂದಿದ್ದವರಲ್ಲಿ ಒಬ್ಬನು, ತನ್ನ ಹೆಸರು ರಾಮೋಜಿ ಎಂದನು. ಇನ್ನೊಬ್ಬನು ಲಕ್ಷ್ಮಣೋಜಿ ಎಂದು ಕರೆದುಕೊಂಡನು. ತಾವು ರಾಮದಾಸನ ಸಹಾಯಕರೆಂದೂ, ದೊರೆಗೆ ಸಲ್ಲಬೇಕಾದ ಹತ್ತುಸಾವಿರ ಮೊಹರುಗಳನ್ನು ತಂದಿದ್ದೇವೆಂದೂ ರಾಮೋಜಿಯು ಹೇಳಿಕೊಂಡನು. ಇತ್ತ ಲಕ್ಷ್ಮಣೋಜಿಯು ತನ್ನ ಕೈಯ ಚೀಲದಲ್ಲಿದ್ದ ಚಿನ್ನದ ನಾಣ್ಯಗಳನ್ನು ನೆಲದ ಮೇಲೆ ಸುರಿದನು. ಹಣ ಕೊಟ್ಟಿದ್ದಕ್ಕಾಗಿ ರಸೀದಿಯನ್ನು ಪಡೆದು, ಬಂದಿದ್ದ ಆ ಯುವಕರು ಹೊರಟು ಹೋದರು.

ಹೀಗೆ ರಾಮಲಕ್ಷ್ಮಣರ ಸುಮನೋಹರ ದಿವ್ಯ ಮಂಗಳ ರೂಪವನ್ನು ಕಂಡು ತಾನಾ ಷಾ ದೊರೆಯು ಮಂತ್ರಮುಗ್ಧನಾದನು. ಅವರಿಬ್ಬರನ್ನಲ್ಲದೆ ಬೇರೆ ಏನನ್ನು ಯೋಚಿಸಲೂ ಅವನಿಗೆ ಆಗಲಿಲ್ಲ. ರಾಮೋಜಿ, ಲಕ್ಷ್ಮಣೋಜಿ ಎಂದು ಬಡಬಡಿಸುತ್ತಿದ್ದನು. ಕೂಡಲೇ ಅವನು ದಿವಾನ ಅಂಕಣ್ಣನನ್ನು ಕರೆಸಿದನು. ರಾಮೋಜಿ, ಲಕ್ಷ್ಮಣೋಜಿ – ಇಬ್ಬರನ್ನೂ ಮತ್ತೆ ನೋಡಬೇಕೆಂದು ಹಪಹಪಿಸಿದನು.

ಅಷ್ಟರಲ್ಲಿ ರಾಮಲಕ್ಷ್ಮಣರು ಸೆರೆಮನೆಗೆ ಬಂದರು. ಸೆರೆಮನೆಯಲ್ಲಿದ್ದ ರಾಮದಾಸರ ಕೊಠಡಿಯ ಕಿಟಕಿಯಿಂದ ರಸೀದಿಯನ್ನು ತೂರಿಸಿದರು. ಹಣಕ್ಕೆ ತಾನಾ ಷಾ ಕೊಟ್ಟ ರಸೀದಿಯನ್ನು ಕಂಡು ರಾಮದಾಸರಿಗೆ ಆಶ್ಚರ್ಯ, ಆನಂದಗಳು ಒಮ್ಮೆಗೇ ಉಂಟಾದವು. ರಸೀದಿಯಲ್ಲಿ ನಮೂದಿಸಿದ ರಾಮೋಜಿ, ಲಕ್ಷ್ಮಣೋಜಿ ಯಾರಿರಬಹುದು ಎಂದು ಚಿಂತಿಸತೊಡಗಿದರು.

ಇತ್ತ ತಾನಾ ಷಾ ತನ್ನ ದಿವಾನ ಅಂಕಣ್ಣನೊಡನೆ, ಸೆರೆಮನೆಗೆ ಧಾವಿಸಿ ಬಂದನು. ರಾಮದಾಸರ ಎರಡೂ ಕೈಗಳನ್ನು ಹಿಡಿದುಕೊಂಡು, ''ಸ್ವಾಮಿ, ಎಲ್ಲಿದ್ದಾರೆ ಅವರು? ಎಲ್ಲಿದ್ದಾನೆ ರಾಮೋಜಿ, ಎಲ್ಲಿದ್ದಾನೆ ಲಕ್ಷ್ಮಣೋಜಿ?'' ಎಂದು ಹುಚ್ಚನಂತೆ ಬಡಬಡಿಸಿದನು. ರಾಮಲಕ್ಷ್ಮಣರನ್ನು ಕಾಣುವ ತವಕ ಅವನಲ್ಲಿ ವಿಪರೀತವಾಯಿತು. ಕ್ರಮೇಣ ರಾಮದಾಸರಿಗೆ ನಡೆದಿದ್ದೆಲ್ಲ ತಿಳಿದುಬಂತು. ಸಾಕ್ಷಾತ್ ರಾಮಚಂದ್ರಸ್ವಾಮಿಯೇ ತನ್ನ ತಮ್ಮ ಲಕ್ಷ್ಮಣನೊಡನೆ ಈ ಮುಸ್ಲಿಂ ದೊರೆಗೆ ದರ್ಶನ ಕೊಟ್ಟಿರುವನೆಂದು ತಿಳಿದ ಅವರ ಮನಸ್ಸು ತುಂಬಿಬಂತು. ತಮಗೆ ದರ್ಶನ ನೀಡದ ಪ್ರಭು ಈ ದೊರೆಗೆ ಆ ಭಾಗ್ಯವನ್ನು ಕರುಣಿಸಿದನಲ್ಲಾ ಎಂದು ತಾನಾ ಷಾನ ಸೌಭಾಗ್ಯವನ್ನು ನೆನೆದು ಅವನ ಮೇಲೆ ಮೆಚ್ಚುಗೆ ಮೂಡಿತು. ಅವರು ತಾನಾ ಷಾಗೆ, ''ದೊರೆಯೇ, ನೀವು ಭದ್ರಾಚಲಕ್ಕೆ ಬಂದರೆ ನನ್ನ ರಾಮನನ್ನು ತೋರಿಸುವೆ, ಅವನ ತಮ್ಮನಾದ ಲಕ್ಷ್ಮಣನನ್ನು ತೋರಿಸುವೆ'' ಎಂದರು.

ರಾಮದಾಸರೊಡನೆ ದೊರೆಯು ಗ್ರಾಮಕ್ಕೆ ಆಗಮಿಸುತ್ತಿರುವ ನೆಂಬ ವಾರ್ತೆಯು ಎಲ್ಲೆಡೆ ಹಬ್ಬಿತು. ಗ್ರಾಮಸ್ಥರೆಲ್ಲ ನೆರೆದರು. ರಾಮದಾಸರು ತಾನಾ ಷಾ ದೊರೆಗೆ ದೇವಾಲಯವನ್ನು ತೋರಿಸಿದರು. ''ನಿಮಗೆ ಸೇರಬೇಕಾದ ಕಂದಾಯದ ಹಣದಿಂದ ಈ ಮಂದಿರದ ನಿರ್ಮಾಣ ನಡೆದಿದೆ. ಅದಕ್ಕೆಂದೇ ರಾಮಲಕ್ಷ್ಮಣರು ನಿಮಗೆ ದರ್ಶನಭಾಗ್ಯವನ್ನು ನೀಡಿದ್ದಾರೆ'' ಎಂದು ಅವನಲ್ಲಿ ಬಿನ್ನವಿಸಿಕೊಂಡರು. ಬಳಿಕ ರಾಮದಾಸರು, ''ಅಯ್ಯೋ ಪ್ರಭುವೇ, ನನಗೆ ನಿನ್ನ ದರ್ಶನವಾಗಲಿಲ್ಲವಲ್ಲಾ'' ಎಂದು ರಾಮನ ಬಳಿ ತಮ್ಮ ವಿರಹತಾಪವನ್ನು ತೋಡಿಕೊಂಡರು. ಭದ್ರಾಚಲ ಮಂದಿರದ ಪುಣ್ಯವಿಗ್ರಹಗಳನ್ನು ದರ್ಶಿಸಿದ ರಾಮದಾಸರು ಹಾಗೂ ತಾನಾ ಷಾ ತಮ್ಮ ಮನಸ್ಸಿನ ಸಂತಾಪವನ್ನು ಕಳೆದುಕೊಂಡು, ಸಮಾಧಾನ ಹೊಂದಿದರು. ರಾಮದಾಸರು ಕೀರ್ತನೆಯನ್ನು ಹಾಡಿ, ಪ್ರಭು ರಾಮಚಂದ್ರನಿಗೆ ಕೃತಜ್ಞತೆಗಳನ್ನು ಸಮರ್ಪಿಸಿದರು. ಇದೇ ಸಂದರ್ಭದಲ್ಲಿ ತಾನಾ ಷಾ ದೇವಾಲಯದ ಉಸ್ತುವಾರಿಗಾಗಿ ಸಾಕಷ್ಟು ಭೂಮಿ ಕಾಣಿಯನ್ನು ದಾನವಾಗಿ ಕೊಟ್ಟನು.

ಈ ನಡುವೆ ಶ್ರೀರಾಮನು ರಾಮದಾಸರಿಗೆ ದರ್ಶನ ಕೊಟ್ಟನು. ಅವರ ಎಲ್ಲ ಪಾಪಗಳೂ ಕ್ಷಯಗೊಂಡಿದೆಯೆಂದೂ, ಮರಣದ ನಂತರ ಅವರಿಗೆ ಮೋಕ್ಷವುಂಟಾಗುವುದೆಂದೂ ಅವನು ಹೇಳಿದನು. ಬಳಿಕ ತನ್ನ ಸೀತಾಸಮೇತವಾದ ಪಾವನರೂಪದ ಮಂಗಳ ದರ್ಶನವನ್ನು ಮಾಡಿಸಿದನು. ರಾಮದಾಸರು ದೇವರ ಸೇವೆಮಾಡುತ್ತ, ಭದ್ರಾಚಲದಲ್ಲಿಯೇ ನೆಲೆನಿಂತರು; ಭದ್ರಾಚಲ ರಾಮದಾಸರೆಂದು ಪ್ರಖ್ಯಾತರಾದರು. ತಮ್ಮ ೭೦ನೆಯ ವಯಸ್ಸಿನಲ್ಲಿ ಅವರು ರಾಮದೇವರ ಪಾದಗಳನ್ನು ಸೇರಿದರು. ❁



## 'ಜಪಯಜ್ಞ' ಕಾರ್ಯಕ್ರಮ

ಬೆಳಗಾವಿಯ ರಾಮಕೃಷ್ಣ ಮಿಷನ್ ಆಶ್ರಮದಲ್ಲಿ 2016ರ **ಡಿಸೆಂಬರ್** 7 ರಿಂದ 11ರ ವರೆಗೆ (ಬುಧವಾರ – ಭಾನುವಾರ) ಮಂತ್ರದೀಕ್ಷೆ ಪಡೆದ ಭಕ್ತರಿಗಾಗಿ **'ಜಪಯಜ್ಞ'** ಕಾರ್ಯಕ್ರಮ ನಡೆಸಲಾಗುವುದು. ಈ ಕಾರ್ಯಕ್ರಮದಲ್ಲಿ ಭಾಗವಹಿಸಬಯಸುವ ಭಕ್ತರು ಬೆಳಗಾವಿ ಆಶ್ರಮವನ್ನು ಸಂಪರ್ಕಿಸಿ ತಮ್ಮ ಹೆಸರನ್ನು ನೋಂದಾಯಿಸಬಹುದಾಗಿದೆ.

**ಫೋನ್: 0831-2432789**

ಇಮೇಲ್: mail@rkmissionashrama.org




# ಸೋದರಿ ನಿವೇದಿತಾ ಭಾಗ ೨

ಕಥೆ: ದೇವಪ್ರಸಾದ ಭಟ್ಟಾಚಾರ್ಯ ಅನುವಾದ: ಉಷಾ ಎಸ್. ಮೂರ್ತಿ ಚಿತ್ರ: ಸುನಿತಾ ವಾಸು

ಶಾಲೆಯಲ್ಲಿದ್ದಾಗಲೇ ಅವಳು ನಾಯಕತ್ವದ ಲಕ್ಷಣಗಳನ್ನು ವ್ಯಕ್ತಪಡಿಸುತ್ತಿದ್ದಳು.



ನಾಯಕಿಯಾಗುವ ಎಲ್ಲ ಗುಣಗಳೂ ಅವಳಲ್ಲಿದ್ದವು.



ಅವಳಲ್ಲಿ ದಿಟ್ಟತನ, ಪ್ರಾಮಾಣಿಕತೆ, ಪರಿಶುದ್ಧತೆ, ಧೈರ್ಯ ಹಾಗೂ ನಿಃಸ್ವಾರ್ಥ ಮನೋಭಾವಗಳಿದ್ದವು.



ಈ ಗುಣಗಳೇ ಜೀವನದುದ್ದಕ್ಕೂ ಅವಳ ಅಮೂಲ್ಯ ಆಸ್ತಿಯಾಗಿದ್ದವು.



ಮಾರ್ಗರೆಟ್ ತನ್ನ ಮುಖ್ಯ ಶಿಕ್ಷಕಿಯವರ ಸಹಾಯದಿಂದ ಬೈಬಲ್ಲನ್ನು ಪೂರ್ತಿ ಓದಿದಳು. ಆತ್ಮಸಂಯಮದ ಪಣ ತೊಟ್ಟಳು.



ಸಂಗೀತ, ಚಿತ್ರಕಲೆ ಮತ್ತು ನೈಸರ್ಗಿಕ ವಿಜ್ಞಾನಗಳಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡಳು.



ಮಾರ್ಗರೆಟ್ ತನ್ನ ಜೀವನ ನಿರ್ವಹಣೆಗಾಗಿ ಶಿಕ್ಷಕ ವೃತ್ತಿ ಹಾಗೂ ಪತ್ರಿಕೋದ್ಯಮವನ್ನು ಮಾಡತೊಡಗಿದಳು.



ನಂತರ ನಾರ್ತ್‌ವೇಲ್ಸ್‌ನಲ್ಲಿರುವ ವ್ರೆಕ್ಸ್ ಹ್ಯಾಮ್‌ನಲ್ಲಿ ಕೆಲಸಕ್ಕೆ ಸೇರಿದಳು.



ವ್ರೆಕ್ಸ್‌ಹ್ಯಾಮ್ ಒಂದು ಕಲ್ಲಿದ್ದಲಿನ ಗಣಿಯ ಪ್ರದೇಶವಾಗಿತ್ತು.



ಅಲ್ಲಿ ಅವಳಿಗೆ ಇಷ್ಟವಾದ ಬಡವರ ಸೇವೆ ಹಾಗೂ ಸಮಾಜ ಸೇವೆ ಮಾಡಲು ಹೆಚ್ಚಿನ ಅವಕಾಶವಿತ್ತು.



ಪಾಠಮಾಡುವುದೆಂದರೆ ಮಾರ್ಗರೆಟ್‌ಳಿಗೆ ತುಂಬಾ ಪ್ರೀತಿ. ಅವಳು ಕಿಂಗ್ಸ್‌ಲೇ ಗೇಟ್ ಶಾಲೆಯಲ್ಲಿ ಸ್ವತಂತ್ರವಾಗಿ ಶಿಕ್ಷಕ ವೃತ್ತಿಯನ್ನು ಮಾಡತೊಡಗಿದಳು.



ಇಲ್ಲಿ ಮುಕ್ತವಾದ ಶಿಕ್ಷಣಕ್ರಮವಿತ್ತು. ಮಕ್ಕಳಿಗೆ ಆಟದ ಮೂಲಕವೇ ಎಲ್ಲವನ್ನೂ ಹೇಳಿಕೊಡಲಾಗುತ್ತಿತ್ತು. ಮಕ್ಕಳು ಆಟವಾಡುತ್ತಾ ಕಲಿಯುತ್ತಿದ್ದರು.




ಸ್ವಾಮಿ ವಿವೇಕಾನಂದರು ಅಮೆರಿಕಾದ ಚಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಿ, ಎಲ್ಲೆಡೆಯೂ ಪ್ರಖ್ಯಾತರಾಗಿದ್ದರು.


ಸ್ವಾಮೀಜಿಯವರು ವೇದಾಂತವನ್ನು ಬೋಧಿಸಲು ಇಂಗ್ಲೆಂಡಿಗೆ ತೆರಳಿದರು.


ಒಂದು ದಿನ ಮಾರ್ಗರೆಟ್ ಸಂಪ್ರದಾಯಸ್ಥ ಮಹಿಳೆಯರ ಒಂದು ಕೂಟಕ್ಕೆ ಸ್ವಾಮೀಜಿಯವರ ಉಪನ್ಯಾಸವನ್ನು ಕೇಳಲು ಹೋದಳು.


ಒಂದು ಚಳಿಗಾಲದ ಭಾನುವಾರ ಮಧ್ಯಾಹ್ನ ಲಂಡನ್‌ನ ವೆಸ್ಟ್ ಎಂಡ್ ಡ್ರಾಯಿಂಗ್ ರೂಮ್‌ನಲ್ಲಿ ಅವರೆಲ್ಲಾ ಅರ್ಧವೃತ್ತಾಕಾರವಾಗಿ, ಸ್ವಾಮೀಜಿಯವರ ಎದುರಿಗೆ ಕುಳಿತಿದ್ದರು.


ಅವರ ಎಲ್ಲಾ ಪ್ರಶ್ನೆಗಳಿಗೆ ಸ್ವಾಮೀಜಿ ಉತ್ತರಿಸುತ್ತಿದ್ದರು.


ಮಧ್ಯೆ ಮಧ್ಯೆ ಕೆಲವು ಸಂಸ್ಕೃತದ ಶ್ಲೋಕಗಳನ್ನು ಹೇಳಿ, ಅದರ ಅರ್ಥವನ್ನು ಇಂಗ್ಲಿಷಿನಲ್ಲಿ ವಿವರಿಸುತ್ತಿದ್ದರು.


ಮಾರ್ಗರೆಟ್ ತೆರೆದ ಮನಸ್ಸಿನಿಂದ ಅವೆಲ್ಲವನ್ನೂ ಕೇಳಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಳು.


ಆ ತರಗತಿಗಳಲ್ಲಿ 'ಏಕೆ?', 'ಹೇಗೆ?' ಎಂಬ ಪ್ರಶ್ನೆಗಳು ಅವಳಲ್ಲಿ ಯಾವಾಗಲೂ ಸಿದ್ಧವಾಗಿರುತ್ತಿತ್ತು.


ಅವಳು ಸ್ವಾಮೀಜಿಯವರನ್ನು ಗುರು ಮತ್ತು ಆದರ್ಶವೆಂದು ಸ್ವೀಕರಿಸಿದಳು.


ಅವಳು ಸ್ವಾಮೀಜಿಯವರ ಶಿಷ್ಯೆಯಾದಳು. ಅವರ ಬೋಧನೆಗಳನ್ನು ಅನುಸರಿಸಿದಳು.


ಅವರ ಭವ್ಯ ವ್ಯಕ್ತಿತ್ವ ಅವಳನ್ನು ಆಕರ್ಷಿಸಿತ್ತು.


ವೇದಾಂತದ ವಿಚಾರಗಳನ್ನು ತೆರೆದ ಮನಸ್ಸಿನಿಂದ ಸ್ವೀಕರಿಸಲು ಅವಳು ಸಿದ್ಧವಾಗಿದ್ದಳು.
ಮುಂದಿನ ಸಂಚಿಕೆಗೆ..



# ವಿಜಯವಾಡದಲ್ಲಿ 'ಕೃಷ್ಣ ಪುಷ್ಕರಂ' ಪುಣ್ಯಸ್ನಾನ

ಹನ್ನೆರಡು ವರ್ಷಗಳಿಗೊಮ್ಮೆ ಕೃಷ್ಣಾ ನದಿಯಲ್ಲಿ ಭಕ್ತಾದಿಗಳು ಪುಣ್ಯಸ್ನಾನ ಮಾಡಿ ಆಚರಿಸುವ **'ಕೃಷ್ಣ ಪುಷ್ಕರಂ'** ೨೦೧೬ರ ಆಗಸ್ಟ್ ೧೨ ರಿಂದ ೨೩ರ ವರೆಗೆ ಕೃಷ್ಣಾ ನದಿಯ ದಂಡೆಯಲ್ಲಿರುವ ವಿವಿಧ ಪ್ರದೇಶಗಳಲ್ಲಿ ಜರಗಿತು. ಗುರುವು ಕನ್ಯಾರಾಶಿಯನ್ನು ಪ್ರವೇಶಿಸುವ ಈ ಶುಭಸಂದರ್ಭದಲ್ಲಿ ಒಂದು ವರ್ಷವಿಡೀ ಈ ಆಚರಣೆ ನಡೆಯುವುದಾದರೂ, ಮೊದಲ ೧೨ ದಿನಗಳಲ್ಲಿ ಮಾಡುವ ಸ್ನಾನ ಅತ್ಯಂತ ಪುಣ್ಯದಾಯಕವೆಂಬ ನಂಬಿಕೆ ಪ್ರಚಲಿತವಾಗಿದೆ. ಆಂಧ್ರಪ್ರದೇಶ, ತೆಲಂಗಾಣ ಹಾಗೂ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ 'ಕೃಷ್ಣ ಪುಷ್ಕರ' ವನ್ನು ನಡೆಸಲಾಗುತ್ತಿದೆ. ಆಂಧ್ರಪ್ರದೇಶದ ವಿಜಯವಾಡ ನಗರವು ಕೃಷ್ಣಾನದಿಯ ದಂಡೆಯಲ್ಲಿದ್ದು, ಅಲ್ಲಿ ವಿವಿಧ ಪ್ರದೇಶಗಳಲ್ಲಿ 'ಕೃಷ್ಣ ಪುಷ್ಕರ' ನಡೆಯುವುದು.

ಈ ಬಾರಿ **ವಿಜಯವಾಡ**ದಲ್ಲಿ ನಡೆದ 'ಕೃಷ್ಣ ಪುಷ್ಕರಂ'ನಲ್ಲಿ ಲಕ್ಷಾಂತರ ಮಂದಿ ಭಕ್ತರು ಪಾಲ್ಗೊಂಡು ಪುಣ್ಯಸ್ನಾನ ಮಾಡಿದರು. ಈ ಪ್ರಯುಕ್ತ ಸರ್ಕಾರದ ವತಿಯಿಂದ ಬೃಹತ್ ಪ್ರಮಾಣದ ಸಿದ್ಧತೆ ಹಾಗೂ ವ್ಯವಸ್ಥೆ ನಡೆದಿತ್ತು. ವಿಜಯವಾಡ ರಾಮಕೃಷ್ಣ ಮಿಷನ್ ವತಿಯಿಂದ ಮಿಷನ್ನಿನ ಸೀತಾನಗರಂ ನಿವೇಶನದಲ್ಲಿ ಸೇವಾ ಕ್ಯಾಂಪನ್ನು ತೆರೆಯಲಾಗಿದ್ದು, ಭಕ್ತಾದಿಗಳಿಗೆ ಅನೇಕ ರೀತಿಯ ಉಚಿತ ಸೇವಾಕಾರ್ಯಗಳನ್ನು ನೆರವೇರಿಸಲಾಯಿತು. ವಸತಿ ವ್ಯವಸ್ಥೆ, ಊಟೋಪಚಾರ, ವೈದ್ಯಕೀಯ ಸೇವೆ, ಮಕ್ಕಳಿಗೆ ಹಾಲು, ಕುಡಿಯುವ ನೀರಿನ ವ್ಯವಸ್ಥೆ, ಮಜ್ಜಿಗೆ ವಿತರಣೆ, ಇತ್ಯಾದಿಗಳನ್ನು ಒದಗಿಸಲಾಯಿತು. ಸುಮಾರು ೨,೪೨,೪೩೬ ಮಂದಿ ಭಕ್ತರು ಇದರ ಉಪಯೋಗ ಪಡೆದಿರುತ್ತಾರೆ. ಇದರೊಂದಿಗೆ ಕ್ಯಾಂಪ್‌ನಲ್ಲಿ ತಾತ್ಕಾಲಿಕ ಮಂದಿರವೊಂದನ್ನು ನೆಲೆಗೊಳಿಸಲಾಗಿತ್ತು. 'ಬುರ್ರಕಥಾ' (ಧಾರ್ಮಿಕ ನಾಟಕ), ಭಜನೆ, ಧಾರ್ಮಿಕ ಸಿನಿಮಾ ಪ್ರದರ್ಶನ, ಸಾಧುಗಳು ಹಾಗೂ ಭಕ್ತರಿಂದ ವೇದಘೋಷ, ಭಜನೆ, ಧಾರ್ಮಿಕ ಪ್ರವಚನ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೂ ಆಯೋಜಿಸಲಾಗಿತ್ತು. ಆಂಧ್ರಪ್ರದೇಶದ ವಿವಿಧ ರಾಮಕೃಷ್ಣ ಆಶ್ರಮಗಳಿಂದ ಹಲವು ಮಂದಿ ಸಾಧುಗಳು, ಸ್ವಯಂಸೇವಕರು ಹಾಗೂ ಭಕ್ತರು ಆಗಮಿಸಿ ಸೇವಾಕಾರ್ಯದಲ್ಲಿ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇದರೊಂದಿಗೆ ಮಿಷನ್ನಿನ ವತಿಯಿಂದ ರಾಮಕೃಷ್ಣ-ವಿವೇಕಾನಂದ ಹಾಗೂ ವೇದಾಂತ ಸಾಹಿತ್ಯ ಪ್ರದರ್ಶನ ಹಾಗೂ ಮಾರಾಟ ಮಳಿಗೆಯನ್ನು ತೆರೆಯಲಾಗಿದ್ದು, ಸುಮಾರು ಒಂದೂವರೆ ಲಕ್ಷ ಮೊತ್ತದ ಗ್ರಂಥಗಳು ಮಾರಾಟಗೊಂಡವು.



Managing Editor : Swami Muktidananda
Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಆರ್ಕಿಡ್ ಟ್ರಾವಲ್ & ಟೂರ್ಸ್




## ದಸರಾ, ದೀಪಾವಳಿ ರಜೆಯಲ್ಲಿ ಪ್ರವಾಸಗಳು

### 10 ದಿನಗಳ ಚೈನಾ, ಹಾಂಕಾಂಗ್, ಮಕಾವ್ ಪ್ರವಾಸ

ಆಕ್ರೋಬೆಟಿಕ್ ಶೋ, ಓಷನ್ ಪಾರ್ಕ್, ಬೀಜಿಂಗ್ ನಗರ ವೀಕ್ಷಣೆ, ಶಾಂಘೈ ನಗರ ವೀಕ್ಷಣೆ, ಏಳು ಅದ್ಭುತಗಳಲ್ಲಿ ಒಂದಾದ ಚೀನಾ ಮಹಾಗೋಡೆ (Great Wall of China) ಸಮ್ಮರ್ ಪ್ಯಾಲೇಸ್, ಹಾಂಕಾಂಗ್ ಮ್ಯೂಸಿಯಂ ಮತ್ತು ಮಕಾವ್ ಹಾಗೂ ಇತರೆ.

ಸೆಪ್ಟೆಂಬರ್
ಅಕ್ಟೋಬರ್ 18

ಚೈನಾ



### 7 ದಿನಗಳ ಸಿಂಗಾಪುರ–ಮಲೇಶಿಯ ಪ್ರವಾಸ

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ,
ವಿಂಗ್ಸ್ ಆಫ್ ಟೈಮ್, ಜುರೋಂಗ್ ಬರ್ಡ್‌ಪಾರ್ಕ್,
ಯುನಿವರ್ಸಲ್ ಸ್ಟುಡಿಯೋ
ಮಲೇಶಿಯ : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ,
ಜಂಟಿಂಗ್ ಹೈಲ್ಯಾಂಡ್

ಅಕ್ಟೋಬರ್ 4, 14
ನವೆಂಬರ್

ಸಿಂಗಾಪುರ್



### 18 ದಿನಗಳ ಆಸ್ಟ್ರೇಲಿಯಾ ಮತ್ತು ನ್ಯೂಜಿಲ್ಯಾಂಡ್ ಪ್ರವಾಸ

ಸಿಡ್ನಿ, ಗೋಲ್ಡ್ ಕೋಸ್ಟ್, ಕೈರ್ನ್ಸ್, ಮೆಲ್ಬೋರ್ನ್ (ಆಸ್ಟ್ರೇಲಿಯಾ)
ಆಕ್ಲೆಂಡ್, ರೊಟೂರಾ, ಕ್ವೀನ್ಸ್‌ಟೌನ್, ಕ್ರೈಸ್ಟ್‌ಚರ್ಚ್ (ನ್ಯೂಜಿಲ್ಯಾಂಡ್)

ನವೆಂಬರ್ 2, 7
ಡಿಸೆಂಬರ್

ಆಸ್ಟ್ರೇಲಿಯಾ



### 7 ದಿನಗಳ ಜಪಾನ್ ಪ್ರವಾಸ

ಹೈ ಸ್ಪೀಡ್ ಬುಲೆಟ್ ರೈಲಿನಲ್ಲಿ ಪ್ರಯಾಣದ ಅನುಭವ ಹಾಗೂ
ಜಪಾನ್ ರಾಜಧಾನಿ ಟೋಕಿಯೋ
ಪ್ರವಾಸ ಸ್ಥಳ : ಒಸಾಕಾ, ಹಿರೋಷಿಮಾ, ಕ್ಯೋಟೋ, ಮೌಂಟ್‌ಫುಜಿ
ನಾರ ನಗರ ವೀಕ್ಷಣೆ ಹಾಗೂ ಇತರೆ

ಅಕ್ಟೋಬರ್ 26
ನವೆಂಬರ್ 7

ಜಪಾನ್



### 8 ದಿನಗಳ ಥೈಲ್ಯಾಂಡ್ – ಕಾಂಬೋಡಿಯ ಪ್ರವಾಸ

ಕಾಂಬೋಡಿಯ – ಸಿಯಾಮ್‌ರಿಪ್, ಅಂಕೊರ್‌ವಾಟ್,
ತೋಂಲ್ಲೇ ಸ್ಯಾಪ್ ಸರೋವರ, ತಾಪ್ರಾಮ್, ಬಯಾನ್, ಬಪೂನ್ ದೇವಾಲಯಗಳು,
ಥೈಲ್ಯಾಂಡ್ – ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ
ಬ್ಯಾಂಕಾಕ್ ಸಿಟಿ ಟೂರ್, ಮರೀನಾ ಪಾರ್ಕ್, ವಾಕರ್ ಸ್ಟ್ರೀಟ್

ನವೆಂಬರ್ 18
ಡಿಸೆಂಬರ್

ಕಾಂಬೋಡಿಯಾ



### 5 ದಿನಗಳ ದುಬೈ, ಅಬುಧಾಬಿ, ಶಾರ್ಜ ಪ್ರವಾಸ

ದುಬೈ ಸಿಟಿ ಟೂರ್, ಬುರ್ಜ್ ಖಲೀಫಾ, ಡೌ ಕ್ರೂಸ್, ಡೆಸರ್ಟ್ ಸಫಾರಿ
ಅಬುಧಾಬಿ ಸಿಟಿ ಟೂರ್, ಶಾರ್ಜ ಸಿಟಿ ಟೂರ್

ಅಕ್ಟೋಬರ್ 13

ದುಬೈ



### 3 ದಿನಗಳ ಅಹೋಬಿಲಂ ನವನಾರಸಿಂಹ ಪ್ರವಾಸ

ಪ್ರವಾಸ ಸ್ಥಳಗಳು: ಜ್ವಾಲಾನರಸಿಂಹ, ಪಾವನನರಸಿಂಹ, ವರಹಾನರಸಿಂಹ
ಕಾರಂಜಿನರಸಿಂಹ, ಮಾಲೋಲನರಸಿಂಹ, ಯೋಗನರಸಿಂಹ, ಭಾರ್ಗವನರಸಿಂಹ
ಉಗ್ರನರಸಿಂಹ, ಛತ್ರವಟನರಸಿಂಹ ಹಾಗೂ ಲಕ್ಷ್ಮೀನರಸಿಂಹ

ಸೆಪ್ಟೆಂಬರ್
ಅಕ್ಟೋಬರ್

ಅಹೋಬಿಲಂ



**ಪ್ರಧಾನ ಕಛೇರಿ : ಬಸವನಗುಡಿ**
ನಂ. 98, 1ನೇ ಮಹಡಿ, ಡಿವಿಜಿ ರಸ್ತೆ
ಬಸವನಗುಡಿ, ಬೆಂಗಳೂರು – 560004.
ಫೋನ್: 080-26670646, 26621983
ಮೊಬೈಲ್ : 9900080794
9900080796

**ಶಾಖಾ ಕಛೇರಿ : ಮಲ್ಲೇಶ್ವರಂ**
ನಂ.198, 1ನೇ ಮಹಡಿ, 11ನೇ ಕ್ರಾಸ್, ಯತಿರಾಜಮಠ
ಬಿಲ್ಡಿಂಗ್, ಮಲ್ಲೇಶ್ವರಂ, ಬೆಂಗಳೂರು – 560003.
ಫೋನ್: 080-41204155, 23445559
ಮೊಬೈಲ್ : 9900080793
9900080791

**ಶಾಖಾ ಕಛೇರಿ : ಶಾಂತಿನಗರ**
ನಂ.4, 1ನೇ ಮಹಡಿ, ದಿವ್ಯಶ್ರೀ ಚೇಂಬರ್ಸ್ ಎದುರು
ಲ್ಯಾಂಗ್‌ಫೋರ್ಡ್ ಟೌನ್, ಶಾಂತಿನಗರ,
ಬೆಂಗಳೂರು – 560025. ಫೋನ್: 080-22221645
ಮೊಬೈಲ್ : 9900080795
9900080799

**www.orchidtours.net**

VIVEKA PRABHA (KANNADA MONTHLY)
October 2016, Vol.17, No.10, No.of pages : 44

Registered With Registrar of News Papers Of India under 72356/2000.postal Regn.No.KA/SK/MYS/480/2015-17. LICENCED TO POST W.P.P.AT YADAVAGIRI MYSORE 570 020,VIDE LICENCE NO.SK/WPP/MYS/155/2015-17



Printed at mayur graphics,Bangalore